ಮೈಸೂರು ಸರಕಾರದವರಿಂದ **Detailed Text Book** ಎಂದು ಮಂಜೂರಾಗಿದೆ.

# ಸಾಹಿತ್ಯ ಸಂಕಲನ

( ಹಾಯರ್ ೧೦ನೆಯ ಇಯತ್ತೆಗಾಗಿ )

★

ಸಂಪಾದಕರು :

**ಶ್ರೀ. ಸಿ. ಎಸ್. ಕುಲಕರ್ಣಿ, *M. A., B. T.***

ಸಂಪಾದಕರು 'ಜಯಂತಿ'

**ಶ್ರೀ. ಗೋ. ವೆಂ. ಜುಳಕಿ, ಧಾರವಾಡ**

★

ಪ್ರಕಾಶಕರು :

**ಕನ್ನಡ ಸಾಹಿತ್ಯ ಪ್ರಕಾಶನ,**

**ಧಾರವಾಡ.**

ಮೈಸೂರು ಸರಕಾರದವರಿಂದ **Detailed Text Book** ಎಂದು ಮಂಜೂರಾಗಿದೆ.

# ಸಾಹಿತ್ಯ ಸಂಕಲನ

( ಹಾಯರ್ ೧೦ ನೆಯ ಇಯತ್ತೆಗಾಗಿ )



ಸಂಪಾದಕರು :

**ಶ್ರೀ. ಸಿ. ಎಸ್. ಕುಲಕರ್ಣಿ, *M. A., B. T.***

ಸಂಪಾದಕರು 'ಜಯಂತಿ'

**ಶ್ರೀ. ಗೋ. ವೆಂ. ಚುಳಕಿ, ಧಾರವಾಡ**



ಪ್ರಕಾಶಕರು :

**ಕನ್ನಡ ಸಾಹಿತ್ಯ ಪ್ರಕಾಶನ,**

ಧಾರವಾಡ.

೧೯೬೨ ] [ ಬೆಲೆ ೧=೩೭

# ಸಂಪಾದಕರ ಮುನ್ನುಡಿ

ಕನ್ನಡನಾಡಿನ ವಿದ್ಯಾರ್ಥಿಗಳಲ್ಲಿ ಕನ್ನಡ ಭಾಷೆ, ಸಾಹಿತ್ಯ — ಇವುಗಳ ಜ್ಞಾನ ಬೆಳೆಯಬೇಕಾಗಿದೆ. ಏಕೆಂದರೆ ಇಂದಿನ ಭಾರತದಲ್ಲಿಯ ಪ್ರತಿಯೊಂದು ರಾಜ್ಯವು ತನ್ನ ಪ್ರಾದೇಶಿಕ ಭಾಷೆಯನ್ನೇ ರಾಜ್ಯಭಾಷೆಯೆಂದು ಪುರಸ್ಕರಿಸುತ್ತಿರುವುದು. ಇದರಂತೆಯೇ ಕನ್ನಡಭಾಷೆಯೂ ತನ್ನ ಪ್ರದೇಶದಲ್ಲಿ ರಾಜಕೀಯ ಭಾಷೆಯೆಂದೂ ಶಿಕ್ಷಣ ಮಾಧ್ಯಮಭಾಷೆಯೆಂದೂ ಪುರಸ್ಕರಿಸುವುದು ಸ್ವಾಭಾವಿಕ. ಎಲ್ಲ ವ್ಯವಹಾರವನ್ನೂ ಕನ್ನಡ ಭಾಷೆಯಲ್ಲಿ ನಡೆಯಿಸಬೇಕಾಗಿರುವಾಗ, ನಮ್ಮ ನಾಡಿನ ಮಾಧ್ಯಮಿಕ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಲ್ಲಿ ಆ ಭಾಷೆಯ ಹೆಚ್ಚಿನ ಜ್ಞಾನ ಬೆಳೆಯಬೇಕೆಂಬುದು ಎಲ್ಲರಿಗೂ ಒಪ್ಪಿಗೆಯೆನಿಸಬಹುದಾದ ಮಾತು. ಎಂತಲೇ ನಮ್ಮ ಸರಕಾರದವರು, ಉಚ್ಚ ವಿದ್ಯಾಭ್ಯಾಸಕ್ಕೆ ಹೋಗಲಿರುವ ವಿದ್ಯಾರ್ಥಿಗಳಿಗೆ ಕನ್ನಡ ಭಾಷಾಸಾಹಿತ್ಯದ ಪರಿಚಯ ಚೆನ್ನಾಗಿ ಆಗಬೇಕೆಂಬ ಉದ್ದೇಶವನ್ನಿರಿಸಿಕೊಂಡು, ಹೊಸ ಪಾಠಕ್ರಮದ ೧೧ನೆಯ ತರಗತಿಗೆ ಐಚ್ಛಿಕ ಪಾಠಕ್ಕೆಂದು ಕನ್ನಡದ ವಿಶೇಷಾಭ್ಯಾಸಕ್ರಮವನ್ನೂ ನಿಯಮಿಸಿರುವರು. ಸರಕಾರದ ನಿಯಮಾನುಸಾರವಾಗಿ, ಈ ಪುಸ್ತಕವನ್ನು ಸಿದ್ಧಗೊಳಿಸಲಾಗಿದೆ.

ಕನ್ನಡ ಗದ್ಯಶೈಲಿಯ ವಿಶಿಷ್ಟ ಮಾದರಿಗಳೆಂದು **'ಮುದ್ರಾ-ಮಂಜೂಷ'** ಎಂಬ ಐತಿಹಾಸಿಕ ಕಥಾಪ್ರಬಂಧದಿಂದಲೂ, **'ಸಮಸ್ತ-ಭಾರತಸಾರ'** ಎಂಬ ಕವಿ ಪಂಪನ 'ವಿಕ್ರಮಾರ್ಜುನ ವಿಜಯ' ಚಂಪೂ ಕಾವ್ಯದ ಗದ್ಯಾವತಾರಗ್ರಂಥದಿಂದಲೂ, ಆವಶ್ಯಕ ಪುಟಗಳಷ್ಟು ವಿಷಯವನ್ನು ಸಂಪಾದಿಸಿ ಇದರಲ್ಲಿ ಕೊಡಲಾಗಿದೆ. ಇವೆರಡೂ ಗದ್ಯಭಾಗಗಳು ವಿದ್ಯಾರ್ಥಿಗಳಿಗೆ ಅನೇಕ ಹೊಸ ಹೊಸ ಶಬ್ದಗಳನ್ನು ಪರಿಚಯಮಾಡಿ ಕೊಡಬಲ್ಲವು.

ಅಭ್ಯಾಸಕ್ರಮದ ಸೂಚನೆಯಂತೆ, ಸುಮಾರು ೩೦ ಪುಟಗಳಷ್ಟಾಗುವಂತಹ ಮೂರು ಏಕಾಂಕ ನಾಟಕಗಳನ್ನು ಇದರಲ್ಲಿ ಕೊಡಲಾಗಿದೆ. ಇವುಗಳಲ್ಲಿ ಮೊದಲನೆಯದು ಐತಿಹಾಸಿಕ, ಎರಡನೆಯದು ಸಾಮಾಜಿಕ, ಮೂರನೆಯದು ಶಿವಭಕ್ತನೊಬ್ಬನ ಜೀವಿತಕ್ಕೆ ಸಂಬಂಧಿಸಿದುದು. ಐತಿಹಾಸಿಕ ನಾಟಕವು ದೇಶಕಾಲೋಚಿತವೆನಿಸುವಂತಹ ಶುದ್ಧ ಭಾಷಾಶೈಲಿ

ಯಲ್ಲಿದೆ; ಸಾಮಾಜಿಕನಾಟಕವು ಉತ್ತರಕರ್ನಾಟಕದ — ವರ್ತಮಾನ-ಕಾಲದ — ಹಿನ್ನೆಲೆಯಲ್ಲಿ ಇದ್ದುದರಿಂದ, ಅದು ಪ್ರಾದೇಶಿಕ ದೇಸಿನುಡಿಯಲ್ಲಿ ಬರೆದುದಾಗಿದೆ. ಭಕ್ತ ಜೀವನನಾಟಕದ ಭಾಷೆ ಸರ್ವಸಾಮಾನ್ಯವಾದುದಾಗಿದೆ.

ಪದ್ಯಭಾಗದಲ್ಲಿ ೧. ರಾಘವಾಂಕ, ೨. ಲಕ್ಷ್ಮೀಶ, ೩. ವಿರೂಪಾಕ್ಷ ಪಂಡಿತ, ೪. ಮಂಗರಸ ಈ ನಾಲ್ಕು ಜನ ಮಧ್ಯಕಾಲದ ಕವಿಗಳ ಕಾವ್ಯಗಳಿಂದ — ಬೇರೆ ಬೇರೆ ನಾಲ್ಕು — ಕೃತಿ ಭಾಗಗಳನ್ನು, ವಿಷಯವೈವಿಧ್ಯದ ಕಡೆಗೆ ದೃಷ್ಟಿಯಿರಿಸಿ ಆಯ್ದು ಪ್ರಕಟಿಸಲಾಗಿದೆ. ಇವುಗಳ ಅಭ್ಯಾಸದಿಂದ ವಿದ್ಯಾರ್ಥಿಗಳಲ್ಲಿ, ಕನ್ನಡ ಕಾವ್ಯಗಳನ್ನು ಹೆಚ್ಚುಹೆಚ್ಚಾಗಿ ಓದಿ, ಅವುಗಳ ರಸಾಸ್ವಾದ ಮಾಡಬೇಕೆಂಬ ಕುತೂಹಲ ಬೆಳೆಯಬಹುದೆಂದು ನಂಬಿದ್ದೇವೆ.

ಇದರಲ್ಲಿರುವ ವಿಸ್ತೃತವಾಗಿ ಪ್ರಕಟವಾಗಿರುವ ಗದ್ಯ–ಪದ್ಯ ಶಬ್ದಾರ್ಥ ಸೂಚಿಗಳೂ, ಅಭ್ಯಸನಗಳೂ ವಿದ್ಯಾರ್ಥಿಗಳ ಅಭ್ಯಾಸಕ್ಕೆ ಸಹಾಯಕಾರಿ-ಯೆನಿಸುವುದರಲ್ಲಿ ಸಂದೇಹವಿಲ್ಲ. ಇದರಲ್ಲಿ ತಮ್ಮ ಕೃತಿಗಳನ್ನೂ ಕೃತಿಭಾಗಗಳನ್ನೂ ತೆಗೆದುಕೊಳ್ಳಲು ಒಪ್ಪಿಗೆಯನ್ನು ಕೊಟ್ಟ ಲೇಖಕ ಮಹನೀಯರಿಗೆ ನಮ್ಮ ಕೃತಜ್ಞತೆಯ ವಂದನೆಗಳು.

—ಸಂಪಾದಕರು

---

## ಪ್ರಕಾಶಕರ ನುಡಿ

ಹೊಸ ಅಭ್ಯಾಸಕ್ರಮದ ೧೦ ನೆಯ ಇಯತ್ತೆಯ ಐಚ್ಛಿಕ ಕನ್ನಡದ ಪಠ್ಯಪುಸ್ತಕವೆಂದು ಈ ಪುಸ್ತಕವನ್ನು ಪ್ರಕಟಿಸಿದ್ದೇವೆ. ವಿದ್ಯಾರ್ಥಿಗಳಿಗೆ ಕನ್ನಡ ಭಾಷೆಯ ಹೆಚ್ಚಿನ ಜ್ಞಾನ ಈ ಸಂಕಲಿತಗ್ರಂಥದಿಂದ ಆಗಬೇಕೆಂದು, ಸಂಪಾದಕರು ಸರ್ವತೋಮುಖವಾಗಿ ಪ್ರಯತ್ನಪಟ್ಟಿರುವರು. ಅದಕ್ಕಾಗಿ ಸಂಪಾದಕರಿಗೆ ನಾವು ತುಂಬ ಕೃತಜ್ಞರಾಗಿದ್ದೇವೆ.

ಇದರಲ್ಲಿ ತಮ್ಮ ತಮ್ಮ ಕೃತಿಗಳನ್ನೂ ಕೃತಿಭಾಗಗಳನ್ನೂ ತೆಗೆದುಕೊಳ್ಳಲು ಸಂತೋಷದಿಂದ ಒಪ್ಪಿಗೆಕೊಟ್ಟ ಲೇಖಕ ವರ್ಗಕ್ಕೆ ನಮ್ಮ ಆದರದ ಅಭಿನಂದನೆಗಳು.

—ಪ್ರಕಾಶಕರು

# ಪ ರಿ ವಿ ಡಿ

## ಗದ್ಯಭಾಗ


| | | | ಪುಟ |
|---|---|---|---|
| ೧ | ಸಮಸ್ತಭಾರತಸಾರ<br>ಅರಣ್ಯವಾಸ — ಅಜ್ಞಾತವಾಸ | ದಿ. ಪಂಡಿತ ಮುಳಿಯ<br>ತಿಮ್ಮಪ್ಪಯ್ಯನವರು | ೧ |
| ೨ | ಮುದ್ರಾಮಂಜೂಷ<br>ರಾಕ್ಷಸಮುದ್ರಿಕಾ ಗ್ರಹಣವು | ಕೆಂಪುನಾರಾಯಣ ಕವಿ | ೨೩ |


## ಏಕಾಂಕಭಾಗ


| | | | |
|---|---|---|---|
| ೧ | ವೀರ ಪುಲಕೇಶಿ<br>(ಐತಿಹಾಸಿಕ ಏಕಾಂಕಿಕೆ) | ಶ್ರೀ. ಬೇಂದ್ರೆ ಲಕ್ಷ್ಮಣರಾಯರು | ೫೨ |
| ೨ | ವಾರಸದಾರ್<br>(ಸಾಮಾಜಿಕ ಏಕಾಂಕಿಕೆ) | ಶ್ರೀ. ಸಿ. ಎಸ್. ಕುಲಕರ್ಣಿ<br>ಎಂ. ಎ., ಬಿ. ಟಿ.,<br>(ಚಿದಂಬರಾನಂದ) | ೬೭ |
| ೩ | ಶಿವಭಕ್ತನಂದನಾರ್<br>(ಭಕ್ತಜೀವನ ಏಕಾಂಕಿಕೆ) | ಶ್ರೀ. ಬೆಟಗೇರಿ ಕೃಷ್ಣಶರ್ಮ | ೮೭ |


## ಪದ್ಯಭಾಗ


| | | | |
|---|---|---|---|
| ೧ | ಹರಿಶ್ಚಂದ್ರ ಕಾವ್ಯ<br>ಹರಿಶ್ಚಂದ್ರನ ಕಾಶೀಪ್ರಯಾಣ | ಕವಿ ರಾಘವಾಂಕ | ೧೦೭ |
| ೨ | ಜೈಮಿನಿಭಾರತ<br>ಸೌಭರಿಮುನಿಯ ಸಂದರ್ಶನ | ಕವಿ ಲಕ್ಷ್ಮೀಶ | ೧೧೫ |

| | | | ಪುಟ |
|---|---|---|---|
| ೩ | ಚೆನ್ನಬಸವ ಪುರಾಣ<br>ಕಲ್ಯಾಣಪಟ್ಟಣದ ಪರಿಸರ | ವಿರೂಪಾಕ್ಷ ಪಂಡಿತ | ೧೨೩ |
| ೪ | ಸಮ್ಯಕ್ತ್ವ ಕೌಮುದಿ<br>ಸುಧರ್ಮರಾಜನ ಕಥೆ | ಕವಿ ಮಂಗರಸ | ೧೩೧ |


## ಶಬ್ದಾರ್ಥ ಸೂಚಿ


ಗದ್ಯಭಾಗ ೧೩೯

ಪದ್ಯಭಾಗ ೧೪೫


## ಅಭ್ಯಸನಗಳು


ಗದ್ಯಭಾಗ ೧೫೩

ಏಕಾಂಕಭಾಗ ೧೫೫

ಪದ್ಯಭಾಗ ೧೫೯


---

# ಗದ್ಯಭಾಗ

## ೧. ಸಮಸ್ತಭಾರತಸಾರ ★ ★ ★ ★

### ಪರಿಚಯ

೧. 'ಸಮಸ್ತಭಾರತಸಾರ' ಎಂಬ ಕೃತಿಯು ಮಹಾಕವಿ ಪಂಪನ 'ವಿಕ್ರಮಾರ್ಜುನ ವಿಜಯ' ಎಂಬ— ಮಹಾಭಾರತದ ಕಥೆಯನ್ನು ಒಳಗೊಂಡ— ಚಂಪೂಕಾವ್ಯದ ಗದ್ಯಾನುವಾದ. ಇದನ್ನು ಬರೆದವರು ದಿವಂಗತ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು. ಕನ್ನಡ ಸಾಹಿತ್ಯ-ಸಂಸ್ಕೃತಿಗಳನ್ನು ಕೂಲಂಕಷವಾಗಿ ಅಭ್ಯಾಸ ಮಾಡಿದವರಿವರು. ಮಂಗಳೂರಿನ ಸೆಂಟ್ ಎಲೋಶಿಯೆಸ್ ಕಾಲೇಜಿನಲ್ಲಿ ಇವರು ಕನ್ನಡ ಪಂಡಿತರಾಗಿ ಇದ್ದರು; ಕನ್ನಡದಲ್ಲಿ ಅನೇಕ ಗ್ರಂಥಗಳನ್ನು ಬರೆದಿರುವರು; ಕವಿಗಳೂ ಆಹುದು. ಪಂಪಮಹಾಕವಿಯ ಬಗೆಗೆ ಇವರು ಕನ್ನಡದಲ್ಲಿ ಮಾಡಿದ ಕಾರ್ಯ ವೈಶಿಷ್ಟ್ಯಪೂರ್ಣವಾದುದು. 'ನಾಡೋಜ ಪಂಪ' ಎಂಬ ಇವರ ಕವಿಚರಿತ್ರ— ಕೃತಿವಿಮರ್ಶಾವಿಚಾರ ಗ್ರಂಥವು, ಇವರ ಪಾಂಡಿತ್ಯಕ್ಕೆ ನಿದರ್ಶನವೆನಿಸುವಂತಿದೆ. ಆ ಮಹಾಕವಿಯ 'ಆದಿಪುರಾಣ' 'ವಿಕ್ರಮಾರ್ಜುನ ವಿಜಯ' ಈ ಎರಡೂ ಗ್ರಂಥ ಗಳನ್ನೂ, ಅಭ್ಯಾಸಕ್ಕೆ ಅನುಕೂಲವಾಗುವಂತೆ 'ಆದಿಪುರಾಣಸಾರ' 'ಸಮಸ್ತಭಾರತ ಸಾರ' ಎಂಬ ಹೆಸರಿನಿಂದ ಗದ್ಯದಲ್ಲಿ ಅನುವಾದಮಾಡಿ, ಬೇರೆ ಬೇರೆ ಎರಡು ಗ್ರಂಥ ಗಳನ್ನಿವರು ಬರೆದಿದ್ದಾರೆ.

೨. ಇಲ್ಲಿ ಅಭ್ಯಾಸಕ್ಕಾಗಿ ಆಯ್ದುಕೊಂಡ ಭಾಗವು 'ಸಮಸ್ತಭಾರತಸಾರ' ಎಂಬ ಗ್ರಂಥದೊಳಗಿನದು. ಪಾಂಡವರು ಅರಣ್ಯವಾಸದಲ್ಲಿ ಇರುವಾಗ, ಅರ್ಜುನನು ಶಿವನನ್ನು ಕುರಿತು ತಪಸ್ಸನ್ನುಮಾಡಿ, ಆತನಿಂದ 'ಪಾಶುಪತಾಸ್ತ್ರ'ವನ್ನು ಪಡೆದ ವಿಷಯ ದಿಂದ ಮೊದಲಾಗಿ, ಅವರು ವಿರಾಟರಾಜನ ನಗರದಲ್ಲಿದ್ದು ತಮ್ಮ ಅಜ್ಞಾತವಾಸವನ್ನು ಮುಗಿಸಿದ ವೃತ್ತಾಂತದ ವರೆಗಿನ ಮಹಾಭಾರತ ಕಥಾಭಾಗವು ಇದರಲ್ಲಿದೆ.

* * * *

# ಅರಣ್ಯವಾಸ - ಅಜ್ಞಾತವಾಸ

ಆ ವರೆಗೆ ಮೈಯನ್ನು ತಪಸ್ಸಿನಿಂದ ತವಿಸಿದ ಗುಣಾರ್ಣವನೆಣಿಕೆ, ಇಂದ್ರನೆಂಬುದನ್ನು ಕೇಳಿ ಕಳವಳಿಸಲಿಲ್ಲ; ಅವರಲ್ಲಿಯೇ ಬೇರೂರಿತು; ಹರ ನತ್ತ ಚಿಗುರಿತು. ಅವನ 'ತಪೋಮಯೂಖಾವಳಿ' ಇರುಳೆನ್ನದೆ ಹಗಲೆನ್ನದೆ ಪಸರಿಸಿತು. ಪರಿಸರದ ತಾಪಸರು, ಆ ಜ್ವಾಲೆಗಳುಕಿದರು. ಶಿವನ ಸನ್ನಿಧಿಯ ನ್ನೊಂದಿದರು. ನೂತನ ತಪಸ್ವಿಯಿಂದಾಗಿ 'ಬೆಂದುವೆಮ್ಮ ತಪಂಗ'ಳು, 'ಇನ್ನಾವ ಶೈಳದೊಳಿರ್ಪೆವು' ಎಂದು ಗೋಳಿಟ್ಟರು. 'ಅದೆಲ್ಲಮಂ ಕೇಳ್ದ' ಶಿವನು 'ಆತನಾರೆಂಬುದ'ನ್ನರಿಯಲೆಂದು ಧ್ಯಾನಾರೂಢನಾದನು; 'ಮರೆದು ಕೆಂದಿದ ಮೀನಂತೆ–ಅಳ್ಳಾಡದಿರ್ದ ಮಡುವಂ ಪೋಲ್ತ'ನು. ಇಡಿ ಪ್ರಪಂಚಕ್ಕೇ ಕನ್ನಡಿಯಾದ ಪರಮೇಶ್ವರನ ಹೃದಯಫಲಕದಲ್ಲಿ ಆಗ ಈ ಉದಾರಮಹೇಶ್ವರನ ಮೈ ಮೂಡಿತು. ಒಡನೆ 'ಬೆರಲಂ ಮಿಡಿದ'ನು; 'ಮುಗುಳ್ನಗೆ ನಕ್ಕ'ನು. 'ಆತಂಗೆ ತಕ್ಕುದಂ–ಆನೆ ಬಲ್ಲೆನೆಂದು ಮುನೀಂದ್ರ ವೃಂದ'ವನ್ನೆಲ್ಲ ಕಳುಹಿದನು. ಆಮೇಲೆ 'ಮುನ್ನೆ ದೇವೇಂದ್ರಂ ತನಗೆ ಮೂಕದಾನವನ ಪುಯ್ಯಲಂ ಗೆಯ್ದುದನವಧಾರಿಸಿ'ದನು. ಇಂದ್ರಕೀಲದಲ್ಲಿ ಆದಿವರಾಹರೂಪದಿಂದಿರುವ ಆ ದೈತ್ಯನನ್ನು 'ಮನುಜ ಮಾಂಧಾತನಿಂ'ದ ಕೊಲ್ಲಿ ಸುವುದೊಂದು, ಆ 'ಸಾಹಸಾಭರಣನೊಳ್–ಏನಾನುಮೊಡಂಬಡಂ ಮಾಡಿ ಮಾಯಾಯುದ್ಧದೊಳಾತನ ಸಾಹಸದ ಚಲದ ಬಲದ ಬಲ್ಲಾಳ್ತನದ ಅಳವಿ ಗಳನಳೆದು ನೋಡಿ ವರದನಪ್ಪು'ದಿನ್ನೊಂದು,–ಎಂದೆರಡು ಸಮುಕಟ್ಟುಗಳನ್ನು ಕಲ್ಪಿಸಿಕೊಂಡನು. ಒಡನೆ ಶಂಭು ವನಚರನಾಗಿ ಮಾರ್ಪಟ್ಟು ನಿಂತನು; ಗಿರಿಜಾತೆ ಪುಳಿಂದಿಯಾಗಿ ಸಿಂಗರಿಸಿಕೊಂಡಳು; ನಚ್ಚಿನ ಕುಮಾರಸ್ವಾಮಿ ಕಿರಾತಬಲನಾಯಕನಾಕಾರವಡೆದನು; ಭೂತಬಲವೆಲ್ಲ ಬೇಡವಡೆಯಾಗಿ ಬಂದು ಕೈವಾರಿಸಿತು. ಕೂಡಲೆ ಬೆಳ್ಳರೊಡೆಯನೆನಿಸಿದ ಬೆಳ್ಳಡಿಯನು, 'ಮೃಗಯಾನಿಧಾನ'ವಾದ ಇಂದ್ರಕೀಲಕ ವನವನ್ನು ಕವಿವುದೆಂದು ತನ್ನವರಿಗೆ ಆಣತಿಯಿತ್ತನು. ಕಳ್ಳನಿಗೆ ಅಳ್ಳೆಯಲ್ಲಿ ಶಂಕೆಯೆಂಬುದು ನಿಜವಾಯಿತು. ಕವಿದೊಡನೆ, ವರಾಹರೂಪದ ಮೂಕದಾನವನು 'ಆ ಕಳಕಳಕ್ಕೇವಯಿಸಿ' ದನು. 'ಆದಿವರಾಹನಾದ ಮುರಾಂತಕನುಮಂ–ಇಳಿಸಿ ನೆಲನಂ'–ಅದಿರಿಸುತ್ತ ಬಂದನು; 'ಕೃತಕ ಕಿರಾತನಟ್ಟುತ್ತ' ಹಿಂಬಾಲಿಸಿದನು. ಈ ಕಪಟನಾಟಕ

ರಂಗವು ನರೇಂದ್ರತಾಪಸನ ಆಶ್ರಮದ ಅಂಗಳದಲ್ಲಾಯಿತು. ಸಮಾಧಿಯಿಂದಿಳಿದ ಧನಂಜಯನು ಆ ನೋಟವನ್ನೀಕ್ಷಿಸಿದನು. ಒಡನೆ, ಮುಂದಿನಿಂದ ಅರಿಗನೊಂದು ಸರಳನ್ನೆಸೆದರೆ, ಹಿಂದಿನಿಂದ ಕಿರಾತನಿನ್ನೊಂದನ್ನು ಬಿಸೆದನು. 'ತೆಗೆದೆಚ್ಚ ಅರ್ಜುನನಂಬು' ಗುರಿಯತ್ತ ಹರಿಯಿತು; 'ತುದಿಯಿಂ ಬಾಲಂಬರಂ ಪಂದಿ ಸೌಳಗೆವೋಪಂತಿರೆ' ಸೀಳಿತು. 'ಪಾರ್ದೆಚ್ಚ ವೃಷಾಂಕನಂಬುತತ್ತನುಪಂಪಚ್ಚಂತೆ ಕೊಂಡತ್ತು'. ಮೊದಲಿನದು ಸೀಳಾದರೆ, ಮತ್ತಿನದು ತುಂಡಾಯಿತು; ದೇವತೆಗಳಿಗಾನಂದವಾಯಿತು. ರಕ್ತಸಿಕ್ತವಾದ ಸರಳನ್ನು 'ಪರಾಕ್ರಮಧವಳನೊಯ್ಯನೆ' ಬತ್ತಳಿಕೆಯೊಳಗಿಟ್ಟನು; ಹೂಗೊಳದಲ್ಲಿ ಕೈಕಾಲು ಮೋರೆಗಳನ್ನು ತೊಳೆದು 'ಮಗುಳ್ದಂ—ಏಕಪಾದದೊಳ್' ನಿಂದು ಮೂಗಿನಲ್ಲಿ ಕಣ್ಣಿಟ್ಟನು.

ಅಷ್ಟರಲ್ಲಿ ಕಿರಾತದಳನಾಯಕನಾದ ಗುಹನೆಯ್ತಂದನು. ವಿಕ್ರಮಾರ್ಜುನನ ತಾಪಸವೇಷವನ್ನು ಕಂಡು ಆಶ್ಚರ್ಯವಡೆದವನಂತೆ ನಟಿಸಿದನು. 'ಗೊರವರೆ,ಬೂದಿಯುಂ ಜಡೆಯುಮಕ್ಕೆ ತಪಕ್ಕೆ', ಈ 'ತನುತ್ರಂ—ಈ ಭಯಂಕರ ಧನು', ಮೊದಲಾದ ಸಾಧನಸಮೂಹವು 'ತಪಕ್ಕಿದೆಂತುಟೊ ?' ನಿಮ್ಮ ಈ ವಿಲಕ್ಷಣ ತಪಸ್ಸಂತಿರಲಿ; ನಮಗೇಕೆ ? ನೀವೂ 'ಎಮ್ಮರಸರ ನಚ್ಚಿನೆಚ್ಚಶರಮುಂ ಸೆರಗಿಲ್ಲದೆ ಕೊಂಡು' ಬರಬಹುದೆ? ಹೋಗಲಿ; 'ಅರಿಯದೆ ತಂದೊಡಂ'—ಏನು; 'ಎಮ್ಮೆರೆಯುಂಗದನೆಮ್ಮ ಕೆಯ್ಯೊಳಿಟ್ಟೆ'ದರೆ ಪ್ರಾಯಶ್ಚಿತ್ತವಾಯಿತು, ಎನ್ನುವ. ಆದರೆ, ನಿಮ್ಮ ಬಗೆ ಹಾಗೆ ತೋರುವುದಿಲ್ಲ; ತಿಳಿದೂ ಪರರೊಡವೆಯನ್ನಪಹರಿಸಿದ ನಿಮ್ಮಂಥ ತಾಪಸರನ್ನು ಕಂಡಿಲ್ಲ, ಕೇಳಿಲ್ಲವೆಂದು ಕಣ್ಣಿಗೆ ಕೈಹಾಕಿ ಮಾತಾಡಿದನು... ಅಂಥ ಅತಿಕ್ರಮವನ್ನು ಪರಾಕ್ರಮಧವಳನೇನು ಸೈರಿಸುವನೆ? ಕೆಂಗಿಡಿ ಸೂಸುವ ಕಣ್ಣಿನಿಂದ ಅವನನ್ನೀಕ್ಷಿಸಿದನು. ಬೇಡನ ಮೊಗದಲ್ಲಿ ನಗೆ ಮುಗುಳಾಗುತ್ತಿತ್ತು. ಅಲಕ್ಷ್ಯಭಾವನೆಯನ್ನರಿತ ಅರಿಗನ ಕೋಪವೇರಿತು. 'ಬೇಡ, ಚಲಂಬೆರಸಂಬ'ನ್ನು ಬೇಡದಿರು, ಎಂದನು. ಕಿರಾತದೂತನದನ್ನು ಕಡೆಗಣಿಸಿದನು. 'ಮೋದಲಾಟಪೊಡೆ ನೀಂ ಬರವೇಳ್ಪುದು ನಿನ್ನನಾಳ್ದನ'ನ್ನೆಂದು ಗುಣಾರ್ಣವನ ಮುಮ್ಮಾತು ಹೊರಟಿತು. ಒಡನೆ, ಮಾಯಾಬಲದಿಂದೆದ್ದ ಚತುರ್ಬಲದೊಡನೆ ಕಪಟಕಿರಾತ ನಿದಿರಾದನು.

ಮತ್ತೇನು ?—ಮಾತುಮಾತಿಗೆ ನಾಟಿತು; ಕೈ ಕೈಗೆ ಮಸೆಯಿತು. 'ಗುಣಾರ್ಣವನಂಬು ಲಕ್ಕಲೆಕ್ಕದೆ' ಕೊಂಡುದು; ಹಗೆವನೊಡ್ಡಿದ 'ಚಾತುರಂಗ ಬಲಮುಂ ತರಿದು'ದು. ಕಿರಾತನಾತನು ಹುರುಪುಗೊಂಡನು; 'ದಿಗಿಭದೊಳ್ ದಿಗಿಭಂ ಪೆಣೆವಂತೆ ಪಾರ್ಥನೊಳ್' ಹೆಣೆದನು. ಹೆಣಗಾಟಕ್ಕೆ ಕಳೆಯೇರಿತು; ಮಲ್ಲಗಾಳೆಗಕ್ಕೆ ಬೆಲೆಗೂಡಿತು. ಒಬ್ಬನಿನ್ನೊಬ್ಬನನ್ನಿಕ್ಕಿ ಡೊಕ್ಕರಿಸಿದ-ರೊಮ್ಮೊಮ್ಮೆ. ಅವನಳವಿಗಿವನು ಬೆರಗಾದರೆ, ಇವನದಕ್ಕವನು ಮೆಚ್ಚಿದನು. ಉರಿದೆದ್ದ ನರನು ಹರನನ್ನು 'ನೆಲಕ್ಕಿಕ್ಕಿ ಗಂಟಲಂ ಮೆಟ್ಟಿ' ಗರ್ಜಿಸಿದನು. ಭಕ್ತನ ಕಲಿತನವನ್ನು ನೋಡಲಿಕ್ಕೆಂಬಂತೆ, 'ಮುನ್ನಂ ತಾಂ ಮರಸಿದ ಕಿರಾತಪತಿಯ ನೊಸಲ-ಒಂದು ಕಣ್ಣು' ನುಸುಳಿ ಹಣೆಯೊಳಗೆ ಹೊಳೆಯಿತು. ಒಡನೆ 'ಉರದೊಳ್ ಫಣಿ, ಕರದೊಳ್ ಬಿಲ್, ಶಿರದೊಳ್ ತೊರೆ' ಮೊದಲಾದ ತನ್ನ ಸನ್ನೆಗಳೆಲ್ಲವೂ ಸನ್ನಿಧಿಗೊಂಡುವು. ಪರಮೇಶ್ವರನ ನಿಜಸ್ವರೂಪವನ್ನು ಕಣ್ಣಾರೆ ಕಂಡ ಗುಣಾರ್ಣವನ ಎದೆಯಾರಿ ಹೋಯಿತು. ಕೊರಳಿನಲ್ಲಿ ನಸುಪಸೆಯೂ ಇಲ್ಲದಾಯಿತು. ಹರನಡಿಯನ್ನು ಹಣೆಗೊತ್ತಿ ಬಿಗಿವಿಡಿದುಕೊಂಡನು. ವರವಂತಿರಲಿ, ತನ್ನ ಪಾಪಕ್ಕಾದರೂ ಬಿಡುವಾಗುವುದೇ ಎಂದು ಭಯಗೊಂಡನು.

'ತನ್ನ ಮುಂದಿರ್ದ ಪರಾಕ್ರಮಧವಳನ' ಸರಿದೂಕದ 'ಪರಾಕ್ರಮಕ್ಕಂ ವಿನಯಕ್ಕಂ ಮೆಚ್ಚಿ'ದ ಹರನ ಮುಖದಲ್ಲಿ ಕೋಪತಾಪಾದಿಗಳ ಲೇಪವೂ ಇರಲಿಲ್ಲ. 'ಮೆಚ್ಚಿದೆಂ ಬರಮುಂ ಬೇಡಿಕೊಳ್ಳೆ'ಂಬ ನುಡಿಯೊಂದೇ ಮೊಳೆಯಿತು. ಅರಿಗನೆದೆ ಧೈರ್ಯವಡೆದುದು. 'ಪೆರತೇನುಮಂ-ಒಲ್ಲೆ'ನು; ಎನಗೆ ನಿಮ್ಮಡಿ ಪಾಶುಪತಾಸ್ತ್ರಮಂ ದಯೆಗೆಯ್ವುದು' ಎಂದು ಬಿನ್ನಯಿಸಿ-ದನು. ಆನಂದವಡೆದ ಹರನು ಪಾಶುಪತವನ್ನೀವಲ್ಲಿ, 'ಗೌರೀದೇವೀಯುಂ-ಅಂಜಲಿಕಾಸ್ತ್ರಮೆಂಬ ಅಮೋಘಾಸ್ತ್ರಮಂ'ನ್ನೂ ದಯೆಗೆಯ್ದಳು. 'ಮೂವತ್ತುಮೂದೇವರುಂ ತಂತಮ್ಮ ನಚ್ಚಿನಂಬುಗಳಂ ತಂದಿ'ತ್ತರು. ಬಗೆದುಂಬಿದ ಗುಣಾರ್ಣವನ ಹಣೆಗೆ ಘೂಮಳೆ ಸುರಿಯಿತು. ಗಣನಾಯಕರೊಡನೆ ಪಾರ್ವತೀಪರಮೇಶ್ವರರ ಮೂರ್ತಿಗಳು ಮರೆಯಾದುವು. ಹಲಗಾಲದ ತಪಸ್ಸಿನಿಂದೊದಗಿದ ದಣಿವನ್ನು ತಣಿಯಿಸಲೆಂದು ನೇವವಿಟ್ಟು, ಗುಣಾರ್ಣವ-ನನ್ನೊಡವೆರಸಿದ ಇಂದ್ರನು ತನ್ನ ನಗರಕ್ಕಭಿಮುಖನಾದನು.

ಮೊದಲೆ ಸ್ವರ್ಗಲೋಕದ ರಾಜಾಲಯವಾದ ಅಮರಾವತಿಯದು. ಹರನೊಲುಮೆಯನ್ನು ಪಡೆದು ಲೋಕವಿಶ್ರುತನಾದ ಮಗನೊಡನೆ ದೇವೇಂದ್ರ ನೈತರುತ್ತಾನೆಂದರೆ ಕೇಳಬೇಕೇ? ಕಣ್ಣುಕಾಣದ, ಕನಸು ಕಾಣಿಸದ, ಬಗೆ ಭಾವಿಸದ ವಿಚಿತ್ರವಸ್ತುಗಳಿಂದ ರಾಜಧಾನಿ ಅಲಂಕೃತವಾಗಿತ್ತು. ಸ್ತ್ರೀ-ಪುರುಷರಿಂದೊಡವೆರೆದ ಅಮರಾವತಿಯು ಕಣ್ಣಿಲ್ಲವೂ ಸಾಹಸಾಂಕನನ್ನು ನೋಡಿಲ್ಲದಂತೆ ಕುಕ್ಕಿದುವು; ಕುಂದಿಲ್ಲದಂತೆ ಹೀರಿದುವು. 'ಈತನೇ ನರ'ನು! 'ಆ ಖಾಂಡವಮಂ ಶಿಖಿಗೆ-ಉಣಲ್ ಕೊಟ್ಟಾತ'ನು!! 'ಈಗಳ್ ಮಹೇಶ್ವರನಂ ಮೆಚ್ಚಿಸಿ ಮಿಕ್ಕ ಪಾಶುಪತಮಂ' ಪಡೆದಾತನು!!! 'ಸಾಹಸಂ ಪಿರಿದು; ಚೆಲ್ವನುಂ-ಅಪ್ಪಂ' ಎಂದು ಬಗೆದ ಭಾವನೆಯನ್ನು, ನೋಡಿದ ಕಣ್ಣನ್ನು, ಆಡಿದ ನಾಲಗೆಯನ್ನು ತಣಿಸಿಕೊಂಡರು. ಇಂದ್ರಾತಿಥ್ಯದಿಂದ ಗುಣಾರ್ಣವನ ಪರಿಶ್ರಮವೂ ತೊಲಗಿತು. ಆಮೇಲೆ 'ತನಗವಧ್ಯರುಂ-ಅಸಾಧ್ಯರುಮಾ'ದ ನಿವಾತಕವಚರೇ ಮೊದಲಾದ 'ಅರುವತ್ತು ಕೋಟಿ ರಕ್ಕಸರನೆನಗೆ ಗೆಲ್ದೀಯು' ಬೇಕೆಂದು ಪುರಂದರನು ಪರಾಕ್ರಮಧವಳನನ್ನು ಪ್ರಾರ್ಥಿಸಿಕೊಂಡನು. ಮಾದೇವನ ವರಬಲದ, ಅರಿಕೇಸರಿಯ ಕರಬಲದ ಬಾಣಕ್ಕೆ ಹುಸಿಯುಂಟೆ? ಮಾತಲಿಯೊಡನೆ ತೇರೇರಿ ದಾಳಿಯಿಟ್ಟ ಅರಾತಿ ಕಾಲಾನಲನು 'ದೈತ್ಯರೆಂಬ ಪೆಸರಿಲ್ಲೆಂಬಂತುಟಂ ಮಾಡಿ ಬಂದ'ನು. ಅಳವಿಲ್ಲ ದಾನಂದವನ್ನೊಂದಿದ ಮಹೇಂದ್ರನು ತನ್ನೊಡನೆ ಅರ್ಧಾಸನವನ್ನೇರಿಸಿಕೊಂಡ ಕಿರೀಟಿಯ ಕೀರ್ತಿಯನ್ನು ಹಾಡಿದನು; ಕೊಂಡಾಡಿದನು.

ಒಮ್ಮೆ ಹರಿಗನೇಕಾಂತಮಂದಿರದಲ್ಲಿ ವಿಶ್ರಮಿಸಿಕೊಂಡಿದ್ದನು. ಒಡ ಹುಟ್ಟಿದವರೇನೆಣಿಸುವರೋ ಎಂಬುದೊತ್ತಟ್ಟು, ವನವಾಸಾವಧಿಯಡಸಿ ತೆಂಬುದೊತ್ತಟ್ಟು; ಹಾಗೆ ಚಿಂತಾದ್ವಯವು ಅವನ ಮನಸ್ಸನ್ನು ಅವುಕಿ ಕೊಂಡಿದ್ದ ಸಮಯವದು. ಕಂಡುದು ಮೊದಲ್ಗೊಂಡು 'ಪರಾಕ್ರಮಧವಳನ ಪರಾಕ್ರಮಕ್ಕಂ ಗಂಡಗಾಡಿಗಂ' ಸೋತ ರಂಭೆ ಸೈರಿಸಲಾರದಾಗಿದ್ದಳು. ಏಕಾಂತದೆಡೆಯನ್ನೀಕ್ಷಿಸಿ ಒಳಹೊಕ್ಕಳು; ಕಾಲ್ಪಿಡಿದಳು; ಮೇಲೆ ಬಿದ್ದಳು. ಅರಿಗನೆಣಿಕೆಗಳೆಲ್ಲ ಅಸ್ತವ್ಯಸ್ತವಾದುವು. ಒಡನೆ ಬಗೆಯನ್ನು ಬಲಿದು ಕೊಂಡನು. 'ಪುರಂದರನರಸಿ'ಯಾಗಿ 'ಎನಗಬ್ಬೆ'ಯಾಗಿ ಇದೇನು ಮಾತಲ್ಲದ ಮಾತನ್ನಾಡುವೆ! 'ತೊದಳ್ನುಡಿಯದೆ ಪೋಗು', ಎಂದನು. ರಂಭೆಯೆದೆಗಾ

ಮಾತು ಕುದಿಮುಕ್ಕುವೆಣ್ಣೆಗೆ ತಣ್ಣೀರುದಳಿದಂತಾಯಿತು. ನಾರಿಯ ಮೋರೆ ಮಾರಿಯದಾಯಿತು. 'ಒಂದಬ್ದದೊಳೆ ಬೃಹಂದಳೆಯಾಗೆ'ಂದು ಮುನಿದು ಶಾಪವನಿತ್ತಳು. ಕರ್ಕೋಟಕನ ನಂಜು ನಳನಿಗನುಕೂಲವೇ ಆಯಿತಲ್ಲವೆ? ಅದರಂತೆ ರಂಭೆಯ ಶಾಪವದು ತನ್ನ ಧರ್ಮರಕ್ಷಣೆಯ ಕವಚವಾಗಬಹು ದೆಂದು ಸಾಹಸಾಂಕನಾನಂದವಡೆದನು.

## ವಿಜಯದ ಮೇಲೆ ವಿಜಯ

ಅತ್ತ ಪಾಂಡವರು ಗುಣಾರ್ಣವನ 'ಪೋದ ದೆಸೆಯನರಿಯದೆ ಚಿಂತಾ ಕ್ರಾಂತ'ರಾದರು. 'ಮಾರ್ಕಂಡೇಯರೆಂಬ ದಿವ್ಯಜ್ಞಾನಿಗಳ ದಿವ್ಯೋಪದೇಶ ದೊಳಯ್ವರುಂ ಗಂಧಮಾದನಗಿರಿಗೆ ವಂದು' ನೆಲೆವಡೆದಿದ್ದರು. ಕುಬೇರನ ಕೊಳದಲ್ಲಿದ್ದ ಕನಕಕಮಲವನ್ನು ತಂದಿತ್ತು ದ್ರೌಪದಿಯ ಎಣಿಕೆಯನ್ನು ಪೂರಯ್ಸುವಲ್ಲಿ ಭೀಮನಿಗೆ ಜಟಾಸುರನೊಡನೆ ಹೋರಾಟವೊದಗಿತು. ರಕ್ಕಸ ರೆಂದರೆ ಸಾಕು;—ಅವರನ್ನು ಸದೆಬಡಿಯುವ ವರೆಗೆ ಭೀಮನಿಗೆಂದಿಟ್ಟ ಅನ್ನವೂ ಬೇಯದು. ಜಟಾಸುರನನ್ನು ಕೊಂದು ಹಕ್ಕಿಹರಣೆಗಳಿಗೆ ಕೋಸಂಬರಿಯಿಕ್ಕಿದನು. ಆ ಮೇಲೆ ಅವನಿಗಾನಂದವಾಯಿತು. ಭೀಮ- ನೊಮ್ಮೆ ಬೇಟೆಗೆಯ್ದಿದ್ದನು. ತನ್ನ 'ಬಟ್ಟೆಯ ಕಣ್ಣೊಳಡ್ಡಂಬಿಳ್ದಿರ್ದ' ಮುದುಗೋಡಗವೊಂದನ್ನು ಕಂಡನು. ಎಷ್ಟೆಷ್ಟೋ ದಾನವರನ್ನು ಹೊಸೆದು ಮುಕ್ಕಿ ಸೊಕ್ಕಿದ ಭೀಮನಿಗೆ ಆ ಹಳೆಗೋತಿಯೊಂದು ಲೆಕ್ಕವೇ? ಛೀ, 'ತೊಲಗು' ಎಂದನು. 'ಬಟ್ಟೆಯಿಂತೊಲಗಲಾರೆಂ—ಅಶಕ್ತ'ನೆಂಬ ಕೊರಳೊಳ ಗಣ ನೀಳ್ನುಡಿಯೊಂದು ಕೇಳಿತು. ಭೀಮನ ಮಾನಸವೆಂಬುದು ಉರಿದರೆ ಸುಣ್ಣದ ಕಲ್ಲಾಗುವಂತೆ ತಣಿದರೆ ಬೆಣ್ಣೆಯ ತಿರುಳಲ್ಲವೆ? ಮುದುಗೋಡಗನ ಆರ್ತಸ್ವರವನ್ನಾಲಿಸಿ ಕನಿಕರಗೊಂಡನು. ಆದರೆ ಕಪಿಯ ಮಾತುಗಾರಿಕೆ ಯನ್ನೆಣಿಸಿ ಅವನ ಮನಸ್ಸನ್ನು ಕುತೂಹಲವು ಸೆರೆಗೆಯ್ದಿತ್ತು. ಅಷ್ಟರಲ್ಲಿ 'ಆರ್ಪೊಡೆನ್ನಂ—ಇಂ ತೊಲಗಿಸಿ ಪೋಗುನೀ'ನೆಂದು ಗೊಣಗಿತದು. ಬೇರೆ ಯವರೆನ್ನುತ್ತಿದ್ದರೆ ಅದನ್ನಾಲಿಸಿ ಭೀಮನುರಿದೇಳಬಹುದಾಗಿದ್ದಿತು. ಅದು ವೃದ್ಧವಾನರನ ಮಾತಲ್ಲವೆ? 'ವೃಕೋದರನ್ಯೋಯನೆ ನಕ್ಕು'ಬಿಟ್ಟನು. ಅಡ್ಡ ವಾಗಿದ್ದ 'ಬಾಲಮಂ ಸಲೆ ಮುರಿದು—ಎತ್ತಲಾಟಿಸಿ'ದನು. ಎತ್ತುವು ದಂತಿರಲಿ; 'ಧರಿತ್ರಿಗೆ ಕೀಲಿಸಿದಂತುಟಾ'ದ ಅದನ್ನಲುಗಿಸಲೂ ಆರದಾದನು

ಭೀಮನು ಬೆರಗಾದನು; 'ದೋರ್ವಲದ ಪೊಡರ್ಪುಗೆಟ್ಟು' ಹೋದನು. ಆ ವಿಶಿಷ್ಟಾಕಾರವೂ ಅಲೌಕಿಕ ಬಲವೂ ಭೀಮನನ್ನೆಚ್ಚರಿಸಿದುವು. 'ನಡೆನೋಡಿ' ಗುರಿವಿಡಿದು 'ನೀನೆಮ್ಮಣ್ಣನೆ, ವಂಶದ ವಾನರನಲ್ಲೈ; ಮಹಾಬಲ, ಪೇಳ್-ಏಕೀನಗದೊಳಿರ್ದೆ' ಎಂದು ಬೆಸಗೊಂಡುದಕ್ಕೆ ವಾನರನಕ್ಕರೆಗೊಂಡನು. 'ಭೀಮನೆಂಬಂ ನೀನೇ'? ಎಂದು ಕೇಳಿದನು. ಪ್ರಶ್ನೆಗೆ ಪ್ರಶ್ನೆಯೊದಗಿತಲ್ಲದೆ ಉತ್ತರವಿಲ್ಲ. ಭೀಮನಿಗೆ ತನ್ನೆಣಿಕೆ ನಿರ್ಣಯವೇ ಆಯಿತು. 'ಅಪ್ಪೆ'ನೆಂದುದಕ್ಕೆ 'ನಿಮ್ಮಣ್ಣನಪ್ಪ–ಅಣುವನೆ ನಾನಪ್ಪೆ'ನೆಂಬ ಉತ್ತರವೂ ಕೂಡಿತು. ಭೀಮನು ಸಾಷ್ಟಾಂಗವೆರಗಿ ಕಾಲ್ವಿಡಿದನು. 'ಪಗೆವರ ಬೇರೊಳ್ ಬೆನ್ನೀರಂ ಪೊಯ್ದು ನಿನಗೆ ಮಾಳ್ಪೆಂ ಧರೆಯ'ನೆಂದು ಮಾರುತಿ ಧೈರ್ಯಗೊಟ್ಟನು. ಭೀಮನಾನಂದಕ್ಕೆ ಪಾರವಿಲ್ಲ. ಶ್ರೀರಾಮನ ಬೇವಸವನ್ನೂ ಕಳೆದ 'ನೀಂ ಬರೆಗಮೇನಾ ಕೌರವರ್ ಗಂಡರೇ'? ಈ ಹುಡುಗರ ಸಾಹಸವನ್ನೀಕ್ಷಿಸಿಕೊಂಡು 'ವಿಜಯಂಗೆ ವಿಜಯಮಾಗಿರೆ [ನೀ] ಮಾತನ ಕೇತನ'ದಲ್ಲಿ 'ಫಣಿಕೇತನ ಬಲಕುತ್ಪಾತ ಕೇತುವಪ್ಪುದೆ' ಸಾಕು, ಎಂದು ಬೇಡಿಕೊಂಡನು. 'ಅದು–ಏವಿರಿದು, ಇತ್ತೆನೆಂದು ಅಣುವನದೃಶ್ಯ'ವಾದನು. ಭೀಮಸೇನನು ಬೇಡಿಗೈತಂದು ಹೊಸ ಸುದ್ದಿಯದನ್ನು ಯುಧಿಷ್ಠಿರನಿಗೆ ಬಿನ್ನಯಿಸುತ್ತಿರುವ ಸುಸಂಧಿಯಲ್ಲಿ, ಬಾಂದಳದಲ್ಲೊಂದು ವಿಮಾನವು ಸುಳಿಯುತ್ತಾ ಇಳಿಯಿತು. ಯುಧಿಷ್ಠಿರಾದಿಗಳು ಕುತುಕಮಾನಸರಾಗಿ ನೋಡುತ್ತಿದ್ದರು. ವಿಜಯನು, ಮಾತಲಿಯೊಡನೆ ವಿಮಾನದಿಂದಿಳಿದನು. ಎರಗಿದ ತಮ್ಮನನ್ನು ಹರಸಿ ಬಿಗಿದಪ್ಪಿದರಣ್ಣಂದಿರು; ಕಾಲ್ವಿಡಿದು ಹರಕೆವಡೆದು ರೋಮಾಂಚಕಂಚುಕಿತರಾದರು ತಮ್ಮಂದಿರು. ಪಾಂಚಾಲಿಯ ಆನಂದಬಾಷ್ಪವು ಚಿಮ್ಮುತ್ತಿರಲು ಮಾತಲಿವೆರಸಿ ಮಣೆಗೊಂಡನರ್ಜುನನು. ಆಮೇಲೆ ಇಂದ್ರಸಾರಥಿಯ ಪರಿಚಯವನ್ನು ಸಹೋದರರಿಗಾಗಿಸಿದನು. ಗುಹ್ಯಕನ ಹೆಗಲನ್ನೇರಿದಲ್ಲಿಂದ ವಿಮಾನದಲ್ಲಿಳಿದ ವರೆಗಿನ ಕಥಾಸಾರವನ್ನು, ದೇವದೇವೇಶ್ವರರು ತನಗೊಲಿದ ಸಂಗತಿಯನ್ನು, ಆ ಲೋಕದ ಅದ್ಭುತಸ್ವರೂಪವನ್ನು,—ಎಲ್ಲವನ್ನೂ ವಿಸ್ತರಿಸಿದನು. ದೇವಲೋಕವನ್ನೆ ಬೆರಗಾಗಿಸಿದ ಬೇಳಂಬಗೊಳಿಸಿದ ವಿಜಯನ ಕೈದುಗಾರಿಕೆಯನ್ನು ಮಾತಲಿ ನಿರೂಪಿಸಿದನು. ಆಮೇಲೆ ಪಾಂಡವರು ಮಾತಲಿಯನ್ನು ಉಪಚಾರದೊಡನೆ ಕಳುಹಿ ದ್ವೈತವನಕ್ಕೆಯ್ತಂದು ನೆಲಸಿದರು.

## ಅಪಾಯೋಪಸಂಹಾರ

ಪಾಂಡವರ ಸಾಹಸ ಪೌರುಷಗಳೆಂದರೆ ಅಪಾರಗಳೆಂಬುದು ದುರ್ಯೋಧನನ ಮನಕ್ಕೆ ಅಚ್ಚುಗಟ್ಟಾಗಿತ್ತು. ಆದರೂ, ಛಲದಿಂದ ಅವೆಲ್ಲವನ್ನೂ ತಡೆದು ತೂಳಿಬಿಡಬಹುದೆಂದು ಅವನ ನಿರ್ಧಾರ. ಅದರಿಂದಲೇ ಪ್ರಜಾರಂಜನವೆಂಬ ವೇಷವನ್ನವನು ಕಟ್ಟತೊಡಗಿದುದು; ಹಗೆಗಳಿಗೆ ನಾಡಿನಲ್ಲಡಿಯಿಡಲಿಕ್ಕೂ ಎಡೆಯಿಲ್ಲದಂತೆಸಗುವೆನೆಂದು ಹವಣಿಸುತ್ತಿದ್ದುದು. ಆದರೆ ಪರಮೇಶ್ವರನನ್ನೊಲಿಸಿ ಶಸ್ತ್ರಾಸ್ತ್ರಗಳನ್ನು ಪಡೆದರು; ಮಾರುತಿಯ ಒಲುಮೆಯನ್ನೊಳಗೊಂಡು ಬಲದೆಲ್ಲೆಯನ್ನು ಮೀರಿದರು; ಎಂಬ ಹೊಸಸುದ್ದಿಗಳು ಕಿವಿಯನ್ನು ಕೀಲಿಸಿದುವು. ಅದರಿಂದ, ಪ್ರಜಾರಂಜನೆಯಾಸೆ ಮಾಸಿಹೋಯಿತು. ದೈವಬಲದವರನ್ನು ದೈವಬಲದಿಂದಲೆ ನಿರ್ಮೂಲಿಸಬೇಕೆಂದು ಭಾವಿಸಿದನು. ಆಭಿಚಾರಿಕರೊಳಗೊಬ್ಬನಾದ ಕನಕಸ್ವಾಮಿ ಎಂಬವನನ್ನು ಏಕಾಂತಮಂದಿರಕ್ಕೆ ಕರೆಯಿಸಿಕೊಂಡನು. ಒಸಗೆಯುಡುಗರೆಗಳನ್ನೊಪ್ಪಿಸಿ ಆಸೆಯ ಫಲವನ್ನು ಕಾಣಿಸಿ 'ಪಾಂಡವರ್ಗಾಭಿಚಾರಮಾಗೆ ಬೇಳ್ದು' ಅವರ ಸದ್ದಡಗುವಂತೆ ಮಾಡು, ಎಂದು ಬೋಧಿಸಿದನು. ಆಸೆ ಏನೆಸಗದು? ನಾಡವರನ್ನು ಬಾಯ್ದೆರೆಯಿಸುವ ಬೇಳಂಬಗಾರನಾದ ಕನಕನ ಬಾಯನ್ನೂ ತೆರೆಯಿಸಿತು. ಹಗೆವರ ಹೊಗೆಯನ್ನೀಕ್ಷಿಸುವೆ, ಎಂದು ದೊರೆಗೆ ಸಂಬುಗೆಯಿತ್ತು ನಡೆದನಾತನು. ಬೆಳ್ಳರ ಬೇಳಂಬದ ಸೂತ್ರಾನುಸಾರವಾಗಿ ಆಭಿಚಾರಕ್ರಿಯೆಯನ್ನೆಸಗಿದನು. 'ಆ ಬೇಳ್ವೆಯ ಕೊಂಡ'ದಿಂದ 'ಅಂಜನಪುಂಜದಂತಪ್ಪ ಮೆಯ್ಯುಂ ಸಿಡಿಲಂ-ಅಡಸಿದಂತಪ್ಪ ದಾಡೆಯುಂ-ಉರಿಯುರುಳಿಯಂತಪ್ಪ ಕಣ್ಣುಂ ಕೃತಾಂತ-ನಂತಾಕಾರಮಾಗಿ ತಳತಳಿಸಿ ಪೊಳೆವ ಕತ್ತಿಗೆಯುಂ ಬೆರಸು' ಕೀರ್ತಿಗೆಯೆಂಬುಗ್ರ ದೇವತೆಯೊಂದು ಹೊರಟುದು. 'ಬೆಸಸು ಬೆಸಸೆಂದು ಬೆಸನಂ ಬೇಡಿ'ತು. 'ಪಾಂಡವರನ್ನೆಲ್ಲಿ ಪೊಕ್ಕೊಡಂ ಕೊಲ್ಲೆಂದು' ಕುಂಕುಮನಾಮದ ಕನಕನು ಮಂಕುಬೂದಿಯನ್ನು ಸುರುಳಿಸಿ ಬೆರಳುದೋರಿದನು. 'ಅಂತೆಗೆಯ್ವೆನೆಂದು' ಒಪ್ಪುಗೊಟ್ಟ ದೆವ್ವವದು ಪಾಂಡವರನ್ನರಸುತ್ತಾ ಬರುತ್ತಿತ್ತು.

ಮಾಂತ್ರಿಕನ ವಿಚಾರವಂತಿರಲಿ. ಈ ಭೂತದ ಬಲದಿಂದ ಹಗೆಗಗಳನ್ನು ಹುರಿಗಡಲೆಯಾಗಿಸುವೆನೆಂಬೆಣಿಸಿದ ಅರಸನ ಛಲವನ್ನೇನೆನ್ನಬೇಕು? ತಾನು

ಭೂತದ ಬಲವನ್ನೊಂದಿದರೆ, ಅವರು ಭೂತಾಧಿಪತಿಯ ಒಲವನ್ನಾಂತವರು. ತಾನವರನ್ನು ಪ್ರೇತಪುರಿಗಟ್ಟಬೇಕೆಂದು ಬಗೆದರೆ, ಪ್ರೇತಾಧಿಪತಿಯೇ ಅವರ ಮೈಗಾವಲಿನ ಬಂಧುವಾಗಿರುವನು. ಕೌರವನಿದನ್ನೆಣಿಸಬೇಕಾಗಿತ್ತು. ಮೂಢ ನಾಗಿದ್ದರೆ ಬಲ್ಲವರ ಮಾತಿಗಾದರೂ ಕಿವಿಗೊಡುತ್ತಿದ್ದನು. ಅವನು ಮೂಢ ನಲ್ಲ, ಮೂರ್ಖನು. ಮೂರ್ಖತೆಗೆ ವಿನಾಶವಲ್ಲದೆ ಬೇರೆ ಮದ್ದಾವುದು? ಕೃತಾಂತನು ಈ ತಂತ್ರವನ್ನರಿತನು. ಆ ಪಿಶಾಚಿಯನ್ನೆದ್ದಾಗಲೆ ತಡೆದು ಬಿಡುವುದು ಅವನಿಗಸಾಧ್ಯವೆ? ಆದರೆ, ಪಾಂಡವರ ಅವಗಡವು ತೊಲಗ ಬೇಕು; ಮಾಡಿದುದಕ್ಕೆ ಕನಕನುಣ್ಣಬೇಕು; ಅಂಥ ತುಂಡೆರಡಕ್ಕೆ ಸಾಧನ ವಾದ ಪೆಟ್ಟೊಂದನ್ನವನು ಮಂತ್ರಿಸಿದನು.

ದ್ವೈತವನದ ತಾಪಸಾಶ್ರಮ ಪರಿಸರದಲ್ಲಿ ಫಕ್ಕನೆ ಸೊಕ್ಕಾನೆಯೊಂದು ಕಂಗೊಳಿಸಿತು. ಅದರ ಭೀಷಣಾಕಾರವನ್ನು ನೋಡಿ, ಘೀಂಕಾರವನ್ನು ಕೇಳಿ, ವಿಪ್ರರೆಲ್ಲ ಭಯಗ್ರಸ್ತರಾದರು. ಕೆಲವರೋಡಿದರು; ಕೆಲವರು ನಡುಗಿ ದರು; ಕೆಲವರು ಮೆಯ್ಮರೆದರು. ಆನೆ ತಾಪಸರನ್ನೆಲ್ಲ ಬೆಚ್ಚಿಸಿತು; ಗುಡಿ ಸಲುಗಳನ್ನೆಲ್ಲ ಕೆಡವಿತು; 'ಬೇಳ್ಪ—ಅರಣಿಯಂ ಕೊಂ'ಡೋಡಿತು. 'ತಾಪಸರ್ ಬಂದು ಯುಧಿಷ್ಠಿರಂಗೆ' ಗೋಳಿಟ್ಟರು. 'ಅದರ ಕೈಗೆ ಪೋದ ಅರಣಿಯಂ ತಂದೀಯ'ದಿದ್ದರೆ ನೀವೇ 'ಇಷ್ಟಿವಿಘ್ನಂಗಳಂ ಮಾಡಿದ'ಂತಾಯಿತು, ಎಂದರು. ಊರನ್ನಾಳುತ್ತಿದ್ದರೂ ಕೌರವರಿಗೆ ಆ ಧರ್ಮದ ತೊಡರುತೊಳಸುಗಳುಂಟೆ? ಅವರ ಸನ್ನಿಧಿಗಯ್ದಿ, 'ಇಷ್ಟಿವಿಘ್ನಂಗಳಂ ಮಾಡಿದಿ'ರಿ, ಎನ್ನುವವರಾರಾದರೂ ಇದ್ದರೆ?—ಇಲ್ಲ. ತಾಗಿದ ಬೆರಳನ್ನೇ ತಾಗುವುದೆಂಬ ಮಾತು ಸುಳ್ಳಲ್ಲ. ಆದರೆ ಹಾರುವರ ನುಡಿಗಟ್ಟನ್ನಾಲಿಸಿದ ಪಾಂಡವರಿಗೆ ಬೇಸರವೂ ಆಗಲಿಲ್ಲ. ಒಡನೆ 'ಪ್ರಚಂಡಕೋದಂಡ ಹಸ್ತರಾ'ದರು; 'ಮದಾಂಧಗಂಧಸಿಂಧುರ'ವನ್ನು ಹಿಂಬಾಲಿಸಿದರು. ಆ ಮತ್ತಹಸ್ತಿ ಗುರಿದೋರಿ ಕಣ್ಸೆಳೆಯಿತು; ಮೈ-ದೋರಿ ಮಾಯವಾಯಿತು; ಗೀಳಿಕ್ಕಿ ಹೊಲಬರಿಯಿಸಿತು; ಸನ್ನೆಗಾಣಿಸಿ ಬಗೆ ಬಾಗಿಸಿತು. ಮೂರು ಜಾವದ ವರೆಗೆ ಪಾಂಡವರು ದಣಿದರಲ್ಲದೆ ಗುರಿವಡೆಯ ಲಿಲ್ಲ. 'ಚೋದ್ಯಂಬಟ್ಟ'ರು; ಆಲದ ಮರವೊಂದರಡಿಯಲ್ಲಿ ವಿಶ್ರಮಿಸಿ ಕೊಂಡರು. 'ಎಲ್ಲಿಯಾದೊಡಂ ನೀರಂ ಕೊಂಡು ಬಾ'ಯೆಂದು ಧರ್ಮಪುತ್ರನು ಸಹದೇವನನ್ನು ಕಳುಹಿದನು.

ಕೆಲದೂರವರಸುತ್ತಾ ಹೋಗುವಲ್ಲಿ ಕೊಳವೊಂದು ಕಾಣಿಸಿತು. 'ತಾನುಂ ನೀರಡಿಸಿದನಪ್ಪುದರಿಂದವರ ಕೆಲದ ಲತೆಯ ಮೆಳೆಯೊಳ್ ಬಿಲ್ಲುಮಂಬುಮಂ ಸಾರ್ಚಿ'ದನು; ಕೊಳಕ್ಕಿಳಿದು ಕೈಕಾಲು ಮೊರೆಗಳನ್ನು ತೊಳೆದು 'ನೀರಂ ಕುಡಿಯಲೆಂದು ನಿಜಾಂಜಲಿಪುಟಮಂ ನೀಡಿದ'ನು. ಆಗ 'ತೋಯಜಷಂಡಮಂ–ಇದಂ–ಆಂ–ಆಯತಿಯಿಂ ಕಾವ'ವನು; 'ಎನ್ನ ಮಾತಿಂಗೆ–ಎಲೆಲೆ' ಮಾದ್ರೇಯ, 'ಮರುಮಾತ'ನೀವುದು; ಆಮೇಲೆ 'ಮದೀಯಸರೋವರದ ತೋಯಮಂ ಕುಡಿ'ಯಬಹುದು, ಕೊಂಡೊಯ್ಯಬಹುದು; ಎಂಬ ದಿವ್ಯವಾಣಿಯೊಂದುದಯಿಸಿತು. ಬಾಯಾರಿಕೆ, ಕಾಲವೇದಿಯಾದ ಸಹದೇವನನ್ನೂ ಮಂಕೆಸಗಿತು. ಆ ಮಾತನಲ್ಲಗಳೆದು 'ನೀರಳ್ಕೆ ಪೋಪಿನಂ ನೀರಂ ಕುಡಿದ'ನು. ತಾವರೆಯಿಲೆಯ ದೊನ್ನೆಯಲ್ಲಿ 'ತಮ್ಮಣ್ಣಂಗೆ ನೀರಂ ತೀವಿಕೊಂಡು ಸರೋವರದಿಂ ಪೊರಮಟ್ಟ'ನು. ಹೊರಟವನೊಂದೆರಡಡಿಯನ್ನಿಡುವಲ್ಲಿ ಬಳಲಿದನು. ಇದೇನು!—ಎಂದೆಣಿಸುವಲ್ಲಿ, ಮೈಮರೆದನು. ಒಬ್ಬನ ಹಜ್ಜೆಯನ್ನಿನ್ನೊಬ್ಬನಂತೆ ಮತ್ತಿನ ಸಹೋದರತ್ರಯವೂ ಅನುಸರಿಸಿತು.

ಪಾಂಡವರನ್ನರಸುತ್ತಾ ಬರುತ್ತಿದ್ದ ದೆವ್ವವಾಗ ಕೊಳದ ದಡವನ್ನೊಂದಿತು. ಅಲ್ಲಿ 'ಬಿಲ್ದಿರ್ದ ನಾಲ್ವರುಮಂ ಕಂಡು', ಗುರಿಗೊಂಡು 'ಬಾಪ್ಪು ಬಳ್ದಿನೆಂದು' ಬಾಹಪ್ಪಳಿಸಿತು; ತಿನಲೆಂದು ತುಡುವೆದ್ದು ಬಳಿಸಾರಿತು. ಆಗ 'ಅನಿತಂ ಮಾಡಿದ ದೈವಂ ಪ್ರತ್ಯಕ್ಷಮಾಗಿ ಗಜರಿ ಗರ್ಜಿಸುತ್ತ' ಬಂದು 'ಎಲೆ ಪಿರಿತಿನಿ, ಪೋ ಮುಟ್ಟದೆ ತೊಲಗು; ಈ ನಾಲ್ವರ್ಕಳ–ಅಸುವ'ನ್ನು ಮೊದಲೆ 'ಅವರ್ಗಳ ಮೆಯ್ಯಿಂ ತೊಲಗಿಸಿ'ದುದು ಮಾತ್ರವೇ ಅಲ್ಲ; ಕಾದುಕೊಂಡೂ ಇರುವ 'ಅಲಂಘ್ಯ ಬಲಂ–ಎನಿಸಿದ–ಎನಗೆ ನೀನಗ್ಗಳಮೇ' ಎಂದು ಕೇಳಿತು. ಜಾತಿದೇವತೆಯಾದ ನನ್ನನ್ನಾಕ್ಷೇಪಿಸುವವರಾರೆಂದು ಹೆಮ್ಮೆವಡೆದ ಕೀರ್ತಿಗೆ ಆ ಮಾತನ್ನು ಗಣಿಸಲೇ ಇಲ್ಲ. ಅದನ್ನರಿತು 'ನೀನೆ ಜಾತಿದೇವತೆಯಪ್ಪೊಡೆ ಎನ್ನೆಂಜಲನೆಂತು ತಿಂಬೆ' ಎಂಬ ದೈವದ ಎದೆದುರುಕಿದ ನುಡಿಯನ್ನು ಕೇಳಿ ಕೀರ್ತಿಗೆಯ ಮನಸ್ಸು ಮಾರ್ಪಟ್ಟುದು. ಹಾಗಾದರೆ, 'ಪಾಂಡವರ್ ಮುನ್ನಮೆ ನಿನ್ನ ಕೆಯ್ಗೆವಂದ'ರು 'ಎನಗಂ–ಆ ಬೆಸಂ ತಪ್ಪಿದುದು'; 'ಆನಾರಂ ತಿಂಬೆಂ ಪೇಳ್'– ಎಂದು ಕೇಳಿತು. 'ನಿನ್ನಂ–ಆವನೊರ್ವಂ–ಆಕಾರಣಂ

ಪುಟ್ಟಿಸಿದಂ—ಆತನನೆ ತಿನ್ನೆ'ಂದು ದೈವದ ಮರುಮಾತೂ ಆಯಿತು. ಹಸಿಮಣ್ಣಿಗೆಸೆದ ಕಲ್ಲಿನಂತೆ ಮಾತದು ಕೀರ್ತಿಗೆಯ ಮನಸ್ಸನ್ನಂಟಿತು. 'ಅಂತೆ ಗೆಯ್ವೆನೆಂದು' ಕಡಿದ ಕಟ್ಟದಂತೆ ಘೋರೆಂದು ತೆರಳಿತು. 'ಕನಕನ ಬೇಳ್ವೆ ತಗುಳ್ದುದು ಕನಕನಂ ಎಂಬೊಂದು' ನಾಣ್ಣುಡಿ ಲೋಕಕ್ಕೆ ದೊರಕಿತು; ಆತನ ಮೈ ಕೀರ್ತಿಗೆಯುದರವಲ್ಲಿ ಕರಗಿತು.

ಹೋದ ಹಜ್ಜೆಯಲ್ಲದೆ ಬಂದ ಹಜ್ಜೆಯಿಲ್ಲದ ತಮ್ಮಂದಿರ ಅವಸ್ಥೆಯನ್ನೆಣಿಸಿ ಕೃತಾಂತನಂದನನು ಚಿಂತಾಕ್ರಾಂತನಾದನು. ಹೋದ ಹೊಲಬನ್ನು ಹಿಡಿದು ಹಿಂಬಾಲಿಸಿದನು. ಕೊಳದ ಬಳಿಯನ್ನೆಯ್ದುವಲ್ಲಿ 'ಬರಸಿಡಿಲ್ ಪೊಡೆಯೆ ಕೆಡೆದ ಶಾಲತರುಗಳಿರ್ಪಂತಿರ್ದ ನಾಲ್ವರ್ ತಮ್ಮಂದಿರಂ ಕಂಡು ಬೆಕ್ಕಸಂಬಟ್ಟ'ನು. ಅವನೆದೆಯಲ್ಲಿ ಮರುಕವು ಹೊನಲಾಗಿ ಹರಿಯಿತು. ಆದರೇನು, ಧರ್ಮಜನೆಂದರೆ ಸಂಸಾರಸಾರವಾದ 'ಧರ್ಮದೊಳ್ ನಿರ್ಮಲ ಚಿತ್ತ'ನಲ್ಲವೆ? ಅಂಥ ಅಲೌಕಿಕ ಸಾಹಸಿಗಳಾದ ಸಹೋದರರು ಹಾಗೆ ಮನಸ್ಸಿಗೂ ಮಿಸುಕದಂತೆ ಅಸುದೊರೆಯಲಿಕ್ಕೇನಾದರೊಂದು ವಿಶಿಷ್ಟ ಕಾರಣವಿರಬೇಕೆಂದು ಭಾವಿಸಿಕೊಂಡನು. 'ಆದೊಡೇನಾಯ್ತು?' ಧರ್ಮವನ್ನೂ ಮೀರುವ ದೈವವಿದೆಯೆ? ಆಮೇಲೆ,'ಆರಿಂದಮಿವರ್ಗೆ—ಇದಾಯ್ತೆಂದಾರಯ್ವೆಂ' ಎಂದೆಣಿಸಿ ಮೊದಲು ನೀರ್ಗುಡಿಯಲೆಂದು ಕೊಳಕ್ಕಿಳಿದನು. ಆಗ 'ಮರುಳಾಗ ಬೇಡ; 'ಎನ್ನ ನುಡಿಗುತ್ತರಮಂ ಮುನ್ನಿತ್ತು ಕುಡಿಂಪೆ ಕಜ್ಜಂ ನಿನಗುತ್ತರಿಸು'ವುದು; 'ಅಂತಲ್ಲದೆ ಇವಂದಿರವೋಲ್ ನೀಂ—ಉಂತೆ ಮೂರ್ಖನಾಗದಿರು' ಎಂದು ಬಾನ್ನುಡಿಯೊಂದು ಕೇಳಿತು. ಒಡನೆ ಧರ್ಮರಾಜನು ಮೇಲ್ನೋಡಿದನು; 'ಎನ್ನ ತಮ್ಮಂದಿರ್ಗಿನಿತಂ ಮಾಡಿದ ದಿವ್ಯಂ—ಈ ದಿವ್ಯಮಕ್ಕುಮೆಂದು' ನಿರ್ಧರಿಸಿಕೊಂಡನು; ಆ ದಿವ್ಯದ ಮಾತಿನ ಹುರುಳನ್ನಾಲೋಚಿಸಿ ಧೈರ್ಯ ವಡೆದನು. ಆಮೇಲೆ ದೈವವು 'ಬೆಸಗೊಂಡುದರ್ಕೆಲ್ಲಂ ಮರುಮಾತು' ಗೊಟ್ಟನು. ಮಾತಿಗೆ ಮೆಚ್ಚಿದ ಯಮನು ಪ್ರತ್ಯಕ್ಷನಾಗಿ ಮಗನನ್ನಾಲಿಂಗಿಸಿ ಕೊಂಡನು. ಕೌರವನಿಗಾಗಿ ಕನಕನೆಸಗಿದ ಮಾಟವನ್ನು, ಅಪಾಯನಿವೃತ್ತಿಗುಪಾಯವಾಗಿ ತಾನೇ ಆನೆಯಾಗಿ ಅರಣಿಯನ್ನಪಹರಿಸಿ ತಮ್ಮನ್ನಾಶ್ರಮದಿಂದಗಲಿಸಿದುದನ್ನು, 'ತನ್ನನುಜರನೀಯುಪಾಯದೊಳೆ ಕೀರ್ತಿಗೆಯೊಡ್ಡಿಸೆ ಕಾದು'ದನ್ನು— ಎಲ್ಲವನ್ನೂ ವಿಸ್ತರಿಸಿದನು. ಆಮೇಲೆ 'ಮರಕೆಂದಿದರ

ನೆತ್ತುವಂತೆ ನಾಲ್ವರ'ನ್ನೂ ಎತ್ತಿ, ತಾನಾನೆಯಾಗಿ ತಂದ ಅರಣಿಯನ್ನೂ ನೀಡಿ, ಚಿರಂಜೀವಿಗಳನ್ನು ಹರಸಿದ ಕೃತಾಂತನಂತರ್ಧಾನವಾದನು. ಸಂತಸ ಪಡೆದ ಪಾಂಡವರು ನಿಜನಿವಾಸಕ್ಕೆ ಬಂದು 'ಅರಣಿಯಂ ಪಾರ್ವಗ್ಗೆ ಕೊಟ್ಟ'ರು. ವನವಾಸಾವಧಿ ಕಳೆಯುತ್ತಾ ಬಂತು. ಒಮ್ಮೆ ಧೌಮ್ಯಪುರೋಹಿತ ನೊಡಗೂಡಿ ಮುಂಗಜ್ಜವನ್ನಾಲೋಚಿಸಿದರು. 'ಶತ್ರುಗೆ ಶತ್ರುಮತ್ಸ್ಯ'ನು; 'ಅದರಿಂದ—ಅಜ್ಞಾತವಾಸಕ್ಕೆ ಚಿಂತಿಪೊಡೆ' ಇಂಥ ಸ್ಥಳವಿನ್ನೊಂದಿಲ್ಲ; 'ರೂಪಪರಾವರ್ತನದಿಂ ವಿರಾಟಪುರಮಂ ಪೊಕ್ಕಿ'ರುವುದೇ ಕರ್ತವ್ಯವೆಂದು ನಿರ್ಧರಿಸಿಕೊಂಡರು. ಅವಧಿಗೆ ಕೆಲಗಾಲವಿರುವಾಗಲೇ 'ತಮ್ಮಯ್ವರುಂ ಪಾಂಚಾಳಿವೆರಸು ಪೋದ ದೆಸೆಯನಾರುಮರಿಯದಂತು ದ್ವೈತಮಂ ಪೊರ ಮಟ್ಟ'ರು; 'ಜಗುನೆಯಂ ಪಾಯ್ದು ಮೂಡಮೊಗದೆ ಪಯಣಂಬೋಗಿ' ಮತ್ಸ್ಯದೇಶವನ್ನೊಂದಿದರು. ವನವಾಸಾವಧಿಯ ಲೆಕ್ಕವನ್ನು ಗುಣಿಸುತ್ತಿದ್ದ ದುರ್ಯೋಧನನ ಗೂಢಚಾರರು ಮೆಯ್ಮರಸಿ ದ್ವೈತವನವನ್ನು ಹೊಂಚಿದರು. ಆದರೇನು?—ಪಾಂಡವರ ಹಜ್ಜೆಯನ್ನು ಕಂಡವರಿಲ್ಲ; ಕನವರಿಸಿದವರಿಲ್ಲ.

## ಮಲ್ಲಮರ್ದನ

ಪಾಂಡವ ಕೌರವರ ಅಜ್ಜಿಯಾದ ಮತ್ಸ್ಯಗಂಧಿಗೆ ಮತ್ಸ್ಯಗಂಧನೆಂಬ ಸೋದರನೊಬ್ಬನಿದ್ದನೆಂದು ಹಿಂದೆಯೇ ಹೇಳಿದೆಯಷ್ಟೆ. ಆತನ ವಂಶೀಯ ನಾದ ವಿರಾಟನು ತನ್ನರಸಿಯಾದ ಸುಧೇಷ್ಣಾ ದೇವಿಯೊಡನೆ ಧರ್ಮಾನುರಕ್ತ ನಾಗಿ ನಾಡನ್ನಾಳುತ್ತಿದ್ದನು. ಒಮ್ಮೆ ಬ್ರಾಹ್ಮಣನೊಬ್ಬನು ಅವಸರವನ್ನು ಪಡೆದು ಆಸ್ಥಾನವನ್ನೊಂದಿ ಅರಸನನ್ನಾಶೀರ್ವದಿಸಿದನು. 'ನೀಂ—ಎತ್ತಣಿಂ ಬಂದಿ'ರಿ? ಎಂಬ ವಿರಾಟನ ನುಡಿಗೆ 'ಆಂ ಧರ್ಮರಾಜನ ಸಮೀಪದೊಳಿ ರ್ದೆವು; ಅರಸಂಗೆ ಪೊಳ್ತು ಪೋಗದಾಗಳ್ ಎಮ್ಮೊಡನೆ ನೆತ್ತವ'ನ್ನಾಡುತ್ತಿ ದ್ದನು. 'ಕನವರಿಸೆ ನಾಲ್ಕು ವೇದಮುಂ—ಎನಗೆ ಮುಖೋದ್ಗತ'ವು; 'ಆರಂಗದ ಮಾತು' ಮತ್ತೇನು? ಆ ಧರ್ಮಾತ್ಮನ ಹಾಡು ಹಾಗಾಗಿ ಹೋಯಿತಷ್ಟೆ! ಆಮೇಲೆ ಮರ ಮುರಿದ ಬಳ್ಳಿಯಂತಾಗಿ ಕಂಕಭಟ್ಟನೆಂಬ ಹೆಸರಾಂತ ನಾನು 'ನಿನಗಾಳಾಗಲ್ಕೆ' ಬಂದೆನು, ಎಂದನು. 'ಆತನ ಭದ್ರಾ ಕಾರಮುಮಂ ಮೃದು—ಮಧುರವಾಣಿಯುಮಂ ಕಂಡು' ವಿರಾಟನು ಸಂತಸ ಗೊಂಡನು; ಆ ಕಂಕಭಟ್ಟನನ್ನಿರಿಸಿಕೊಂಡನು. ದಿನವೆರಡುದಿನಗಳೆವಲ್ಲಿ

‘ಬೋನವೇಳಿಗೆಯಂ ಸಟ್ಟುಗಮುಮಂ–ಒರ್ವ ಪರಿಚಾರಕನಿಂ ಪಿಡಿಯಿಸಿಕೊಂಡು’ ಬೆರಗನ್ನೆರಗಿಸುವ ಮೆಯ್ಯ ಗಂಡೊಬ್ಬನು ಬಂದನು; ಎಡೆವಡೆದು ದೊರೆಯನ್ನೀಕ್ಷಿಸಿದನು. ಕುತೂಹಲಿತಾಂತರಂಗನಾದ ವಿರಾಟನು ‘ನಿನ್ನ ಬಿನ್ನಾಣಮೇನ’ಯ್ಯಾ? ಎಂದು ‘ಬೆಸಗೊ’ಂಡನು. ಅದಕ್ಕಾತನು ‘ಎನ್ನಟ್ಟ ಅಡುಗೆಯನುಂಡೊಡೆ ಬಿನ್ನಣಮೇಂ–ಅರಸನರೆಗಳಾಗವು, ಸವಿಯೊಳ್ ನಿನ್ನಂ ಮೆಚ್ಚಿಪೆ’ನು; ಇದೇ ನನ್ನ ಬಿನ್ನಾಣದ ಒಂದು ಸ್ವರೂಪವೆಂದನು. ಅವನ ಮೈಮಾತುಗಳ ಅಂದಕ್ಕೆ ಮನಸೋತ ರಾಜನು ಆ ಬಿನ್ನಾಣದ ಇನ್ನೊಂದು ಮೈ ಯಾವುದು, ಎಂದು ಕೇಳಿದನು. ಆತನು ನಸುನಗುತ್ತಾ ಆ ಮೈಯೆಂದರೆ ನಿಮ್ಮಿದಿರಿನಲ್ಲಿರುವ ಈ ಮೆಯ್ಯೇ. ‘ಎಡರಿದೊಡೆ–ಎನ್ನರೊಳಂ ಮಲ್ಲ’ನೆನಿಸುವ ‘ವಲ್ಲಲನೆಂಬ’ವನು ತಾನು ಎಂದನು. ಸಂತುಷ್ಟನಾದ ಅರಸನು ‘ನಿನ್ನನಾಳ್ವೆನೆಂದು ಬಾಣಸಿನ ಕರಣಕ್ಕೆ’ ಅವನನ್ನಣಿಗೊಳಿಸಿದನು. ಕೆಲದಿನದಲ್ಲಿ ‘ಅಂಕವಣಿಯುಂ ಬಾಳುಂ ಬಾರುಂ ಚಮ್ಮಟಿಗೆಯುಮಂ–ಒರ್ವ ಕೀಳಾಳಿಂ ಪಿಡಿಯಿಸಿಕೊಂಡು ಬಂದ’ ಮತ್ತೊಬ್ಬನು ಅರಸನಲ್ಲಿ ‘ತಂತ್ರಪಾಳವೆಸರೊಳ್ ಮಾಸಾದಿಯಾಗಿರ್ದ’ನು; ‘ಗೋಪಾಳವೇಷದೊ’ಳಿನ್ನೊಬ್ಬನು ‘ಗೋಮಂಡಳಾಧ್ಯಕ್ಷ’ನೆನಿಸಿದನು.

ಕೆಲದಿನಗಳಾಗುವಲ್ಲಿ ರಾಯನೋಲಗದೊಳಗೆ ಮತ್ತೊಂದು ವ್ಯಕ್ತಿ ನುಸುಳಿತು. ಆ ವ್ಯಕ್ತಿಯೆಂದರೆ ಗಂಡಲ್ಲ, ಹೆಣ್ಣಲ್ಲ; ಎರಡೂ ಕೂಡಿದ ಅಂದೊಂದು ರೀತಿಯದು. ಹೆಸರೇನೆಂದು ಕೇಳಿದರೆ ಬೃಹಂದಳೆಯೆಂಬ ಉತ್ತರವೊದಗಿತು. ಆ ವ್ಯಕ್ತಿಯ ಗಾನನರ್ತನಗಳಿಗೆ ಅಂತಃಪುರದೊಡವೆರೆದ ಅರಸನ ಆಸ್ಥಾನದ ನೋಟಕರೆಲ್ಲ ಬೆರಗಾದರು. ಈ ಅಲೌಕಿಕ ಗಾನನರ್ತನಗಳನ್ನೇನು ರಂಭೆಯೇ ಕಲಿಸಿದಳೋ ಎಂದು ನೋಟಕರು ಗುಣುಗುಟ್ಟುತ್ತಿದ್ದರು. ಆ ಮೇಲೆ ರಾಜದಂಪತಿಗಳ ಅಭಿಲಾಷೆಯಂತೆ ‘ಮಗಳಪ್ಪ–ಉತ್ತರೆಗೆ’ ಗಾನನರ್ತನಗಳನ್ನು ಕಲಿಸುತ್ತ ಅವನು ವಿರಾಟನಂತಃಪುರದಲ್ಲಿ ನೆಲಸಿದನು. ಮತ್ತೊಮ್ಮೆ ಸೈರಂಧ್ರಿಯೊಬ್ಬಳು ಬಂದು ಅಂತಃಪುರಕ್ಕೈಯ್ದಿ ಕಾಣಿಕೆಯಿತ್ತು ಮಹಾರಾಣಿಯನ್ನೀಕ್ಷಿಸಿದಳು. ರೂಪರೇಖೆಯನ್ನೂ ಭಾವಭಂಗಿಯನ್ನೂ ಎಣಿಸಿ ಬೆರಗಾದ ಅರಸಿ ‘ನೀನಾರ್ಗೆ–ಏನೆಂಬೆಯೆಂದು’ ಆಕೆಯ ಗೊತ್ತುಗುರಿಗಳನ್ನರಸಿದಳು. ಅದಕ್ಕವಳು ‘ವಿವಿಧ ಗಂಧಂಗಳಂ–ಆಂ–ಅವಯವದೊಳ್

ಮಾಡುವ ಘಟ್ಟವಳ್ತಿ'; ಆದರೆ, 'ಗಂಡವಳ್ತಿಯಲ್ಲ' ಎಂದು ಸೊಲ್ಲಿಸಿದಳು; 'ಪೆಸರೊಳ್ ಸೈರಂಧ್ರಿ' ನಾನು; 'ಅಳಿವೆಸನದ ದೆಸೆಯರಿಯೆ'ನು; 'ಎನಗೆ ಗಂಧರ್ವರ ಕಾಪು ಅಸದಳಮುಂಟು'; 'ಇರಿಸುವೊಡಾಂ ಬೆಸಕೆಯ್ವೆ'ನು; 'ನಿನ್ನ ಬೆಸಸಿದ್ದಂವದೊಳಿರ್ಪೆ'ನು, ಎಂದಳು. ವಿರಾಟನ ಮಹಾದೇವಿಗೆ ಸಂತೋಷವಾಯಿತು; ಅವಳನ್ನು ತನ್ನವಳನ್ನಾಗಿ ಮಾಡಿಕೊಂಡಳು. ಈ ಕಂಕಭಟ್ಟಾದಿಗಳೆಂಬವರ ಸರಿಯಾದ ಹೊಲಬು ಅಂದಿನ ವಿರಾಟನಿಗಾಗ ದಿದ್ದರೂ ಇಂದಿನ ವಾಚಕರಿಗಾಗಿದೆ ಎನ್ನುವ.

'ಒಂದು ದಿವಸಂ ವಿರಾಟಂ ನೆಲದೊಳ್ಳುಳ್ಳ ಮಲ್ಲರೆಲ್ಲರುಮಂ ಬರಿಸಿ ಮಲ್ಲ'ಗಾಳೆಗವನ್ನು ನೋಡುತ್ತಿದ್ದನು. ಆಗ 'ಸುಯೋಧನನ ಮಲ್ಲಂ ವಿಷ ಖರ್ಪರನೆಂಬಂ ತನ್ನ ಮಲ್ಲರೆಲ್ಲರುಮಂ ಕೊಂದು' ಕೊಂಬನ್ನೂದಿಸಿದನು. ಅರಸನೆದೆ ವಿರಸವಾಯಿತು; ಮೋರೆ ಮುಸುಡಾಯಿತು. ಆಗ ನಮ್ಮ ವಲ್ಲಲನೂ ಒಬ್ಬ ಮಲ್ಲರಾಯನಲ್ಲವೇ ಎಂದು ಕಂಕಭಟ್ಟನು ವಿರಾಟನೊಡ ನಾಡಿದನು. ಅವನ ಸಾಹಸವು ಅಡುಕಳದಲ್ಲಲ್ಲದೆ ಈ ಹೋರ್ಕಳದಲ್ಲಿ ಸಾಗುವುದೇ ? ಎಂದು ಮತ್ತೊಬ್ಬನೆಂದನು. ಸಿಗ್ಗಾದ ರಾಜನು ಮುಂದಾರಿ ಗಾಣದೆ 'ಹೋವರೆ ಕಲ್ಲು, ಬಂವರೆ ಹಣ್ಣು' ಬರಹೇಳು, ಎಂದನು. ಮಲ್ಲ-ಗಂಟಿಕ್ಕಿದ ವಲ್ಲಲನೆಯ್ತಂದು ದೊರೆಗೆರಗಿ ಕಳಕ್ಕಿಳಿದನು. ಕೆಮ್ಮಣ್ಣಿನ ಸಿಂಧೂರವನ್ನು ಲೇಪಿಸಿಕೊಂಡು ಬಾಹಪ್ಪಳಿಸಿದನು; ನೆಲವು ಮೂರಿಬಿಡು ವಂತೆ ಆರ್ಭಟಿಸಿದನು. ಆಗ ವಲ್ಲಲನೆದೆಯ ಕಡುಹು ತೆಗಲೆಯಲ್ಲುಬ್ಬಿತು; ಕಣ್ಣಿನಲ್ಲಿ ತುಳುಕಿತು. 'ತಳಮುಂ ಮಾರ್ಪೊಸೆದು' ಮೇಲ್ವಾಯ್ದನು; ವಿಷಖರ್ಪರನನ್ನು 'ಅವುಂಕಿ' ಬಿಗಿದನು. ಬಿಗಿದ ಬಿಗಿ ಬಿಗಿಯುತ್ತಾ ಹೋಯಿತು; ಇದಿರಾಳಿಯ ಕಣ್ಣಾಲಿ ತಿರುಗುತ್ತಾ ಬಂತು. ಕೂಟದ ಕೋಲಾಹಲ ಧ್ವನಿಯೊಡನೆ ಮಲ್ಲನ ಉಸಿರಡಗಿತು. ಹಿಡಿಯೊಳಗೆ ಹಿಂಡಿ ಯಾದ ಮಲ್ಲನೆಂಬವನ ಮೆಯ್ಯನ್ನಿಡಾಡಿದ ವಲ್ಲಲನು ದೊರೆಗೆರಗಿದನು; ತನ್ನ ತಾವಿಗೆ ತಿರುಗಿದನು. 'ಅಂತು ಸುಯೋಧನನ ಮಲ್ಲನಂ [ಕೊಂದು] ವಲಲಂ ವಿರಾಟನ ಮನೆಯೊಳ್ ತನ್ನ ಮಾತೆ ಮಾತಾಗಿರ್ದ'ನು.

## ಕೀಚಕ ನಿಪಾತನ

ಮಲ್ಲಮರ್ದನದ ಬಗೆಯನ್ನರಿತ ದುರ್ಯೋಧನನ ಕಣ್ಣು ವಿರಾಟಪುರ

ದಲ್ಲಿ ಗುರಿಗೊಂಡಿತು. ಅಜ್ಞಾತರಾಗಿ ಮರೆಗೊಂಡವರನ್ನರಿಯಲೆಂದು ದಳ ವೊಂದನ್ನು ಕಳುಹಿದನು. 'ವಿರಾಟನ ಮೈದುನಂ ಸುಧೇಷ್ಣೆಯೊಡವುಟ್ಟಿದ ನ್ಸೊರ್ವ ಸಿಂಹಬಲ'ನೆಂಬ ಕೀಚಕಾಗ್ರಜನು 'ಸುಯೋಧನನ ದಂಡೆಲ್ಲ ಮಂ-ಇರಿದೋಡಿಸಿ'ದನು; ಅರಸನನ್ನೀಕ್ಷಿಸಿ ಮನ್ನಣೆವಡೆದು, ಅಂತಃಪುರಕ್ಕೆ ಸರಿದು ಅಕ್ಕನ ಕಾಲಿಗೆರಗಿದನು. ವಿಜಯಿಯಾಗಿ ಬಂದ ತಮ್ಮನನ್ನಾಕೆ ಆನಂದದಿಂದೆತ್ತಿ ಬಹುಮಾನಿಸುತ್ತಿದ್ದಳು. ಆಗ ನರಗುಂಪಿನಿಂಪಿಗೆ ಸಿಲುಕಿದ ಕೀಚಕನ ಮೂಗು ಮೊಗವನ್ನು ತಿರುಗಿಸಿತು. ಕಣ್ಣುಗಳು 'ಮಹಾದೇವಿಯ ಕೆಲದ'ಲ್ಲಿದ್ದ 'ಘಟ್ಟಿ ಮಗುಳ್ಚುವ ಘಟ್ಟಿವಳ್ತಿಯು' ಮೆಯ್ಯೆಲ್ಲೂರಿದುವು. ತನ್ನೆದೆಯನ್ನೇ ಅರೆಯುವಂತಾಕೆ 'ಘಟ್ಟಿಮಗುಳ್ಚುವಂದ'ವು, ಅವನಂತ-ರಂಗವನ್ನು ಮಿದಿದುವು. ಬೆವರನ್ನೊರಸಲೆಂದೊಮ್ಮೆ ಮೋರೆಯನ್ನೋಸರಿಸಿ ದಾಕೆಯ ಕಡೆಗಣ್ಣು ಅವನನ್ನೀಕ್ಷಿಸಿತು. ಮತ್ತೇನು? ಮನಸ್ಸಿನೊಳಗೇ ನಂಜಿನ ಮಂಡಿಗೆಯನ್ನು ಮೆಲ್ಲಲಾರಂಭಿಸಿದನು. ಮೊದಲು 'ಇವಳೇಂ ಕುಲನಾರಿಯೋ! ವಾರನಾರಿಯೋ!' ಎಂಬ ಕ ವ ಲೆ ಣಿ ಕೆ; ಮತ್ತೆ 'ಆವಳಪ್ಪೊಡಂ-ಅಕ್ಕೆ' ಎಂಬ ನಿರ್ಧಾರವು; ಆಮೇಲೆ 'ತಲೆ ಇಂದೆ ಪೋದೊಡಂ' ಹೋಗಲಿ; 'ಲಯಮಿಂದೆ ಬರ್ಪೊಡಂ' ಬರಲಿ; ಈಕೆಯ ನ್ನೊಂದದ ಬಾಳೆಂದರೆ ಬಾಳೇ ಸರಿ, ಎಂದೆಣಿಸಿದನು. ಮೆಲ್ಲನೆ 'ಈಕೆ ಯಾರ್ಗೆಂದು' ತನ್ನಕ್ಕನನ್ನು ಬೆಸಗೊಂಡನು. ತಮ್ಮನ 'ಸೋಲ್ತ ಕಣ್ಣ ರಿದ' ರಾಣಿ, 'ಸಾಮಾನ್ಯವನಿತೆಯಲ್ಲ, ಇವಳ್ ಗಂಧರ್ವವನಿತೆ; ಎನ್ನೊ ಳಾದ ಮಚ್ಚುಂ ಮೋಹಮುಂ ಕಾರಣಮಾಗಿರ್ಪ'ಳೆಂದು ಅವನ ಮರುಳನ್ನು ಮಾರ್ಪಡಿಸಲಿಕ್ಕೆ ಹವಣಿಸಿದಳು. ಸಾವವನಿಗೆ ಮದ್ದೂ ನಂಜಾಗುವುದಂತೆ. ತನ್ನ ನಲ್ಮೆಗಾಸರೆಯಾದಾಕೆ ಊಳಿಗದವಳಲ್ಲ, ಗಂಧರ್ವಕಾಂತೆಯೆಂಬು ದನ್ನರಿತೊಡನೆ ಅವನ ಬೇಟವಗ್ಗಳಿಸಿತು. ಮಾತಾಡದೆ ನಿಜನಿವಾಸಕ್ಕಯ್ದಿ ದನು. 'ಎನಗೆ ತನ್ನ ಘಟ್ಟಿವಳ್ತಿಯ ಕೆಯ್ಯೊಳಪೂರ್ವ ವಿಲೇಪನಂಗಳಂ-ಅಟ್ಟುವುದೆಂದು' ಅಕ್ಕನಲ್ಲಿಗೆ ಆಳನ್ನಟ್ಟಿದನು. 'ತಮ್ಮನುಪರೋಧ'ವನ್ನಲ್ಲ ಗಳೆಯಲಾರದೆ, ವಿಲೇಪನಗಳೊಡನಾಕೆ ಸೈರಂಧ್ರಿಯನ್ನು ಕಳುಹಿದಳು.

ಎಣಿಕೆಯಂತೆ ಬಂದವಳನ್ನು ಕಂಡ ಕೀಚಕನಂತರಂಗವು ತರಂಗದಂತು ಕ್ಕಿತು. ಅಕ್ಕನ ಕಣ್ಣನ್ನು ಕಟ್ಟಿ ಆ ಸೈರಂಧ್ರಿಯನ್ನು ಬಳಿಗೆ ಬರಿಸಿಕೊಂಡ ತನ್ನ ಜಾಣ್ಮೆಗೆ ತಾನೇ ಹಿಗ್ಗಿದನು. ಕಾಮಾಕ್ರಾಂತನಾದ ಕೀಚಕನೆದ್ದು

ಸವಿೂಪಕ್ಕೆಯ್ತಂದನು. 'ಮಾಸಿದೆಯಾದೆ; ಉಡಲ್ ತರಿಪೆನೆ? ತಂಬುಲಂಬಿಡಿ; ಮನೋಜಶಿಖಾಳಿ' ತಾಗಿ ಮೊದಲೆ ಉರಿದು ಹೋದ ಎನ್ನೆದೆ ನಿನ್ನನ್ನು ಕಂಡು ಆರಿದುದು ಎಂದನು. 'ಮತ್ತಂ–ಎನಿತಾನುಂ ತೆರ'ದ ಹುಚ್ಚುನುಡಿ ನಾಲಗೆಯಲ್ಲಿ ನರ್ತಿಸಿತು. ಕಡೆಗೆ ತಡೆಯಲಾರದೆ ಮೇಲ್ವಾಯಲಿಕ್ಕೆಂದು ಬಂದನು. ಸೈರಂಧ್ರಿ ಸೈರಣೆಗೆಟ್ಟಳು. 'ಎನ್ನೊಳಿಂತಪ್ಪ ಅಳಿಪಿನ ನುಡಿಯ'ನ್ನಾಡದಿರು; 'ನಿನ್ನ ಮಾತಿಂಗೆ ಚಿಃ ಮೆಳ್ಪಡುವಂತಪ್ಪಾಕೆಯಲ್ಲೆ'ನು; 'ಬಿಡು ಗಡ, ಬಿಡದಂದು–ಎನ್ನ ಗಂಧರ್ವರಿಂದಂ ಮಡಿವೈ' ಎಂದಳು; ಮಾತು ಕಿವಿವೊಕ್ಕೊಡನೆ ಕೀಚಕನೆದೆಯ ಸವಿಯೆಂಬುದು ಕಹಿಯಾಯಿತು. ನೆತ್ತರು ನಂಜಾಯಿತು. 'ಅಂತಪ್ಪೊಡೆ ಬಿಡೆ'ನು. ಏನು, 'ಎನಗಂ ಮೇಗು ವೇಳ್ದಪೆ'ಯೋ? ಎಂದಬ್ಬರಿಸಿದನು. 'ಆರ್ಪೊಡೆ ನಿನ್ನಂ ಕಾವ ಗಂಧರ್ವರಿ ಬಿಡುಸುಗೆ, ಪೋಗು' ಎಂದು ಆ ದುರಾತ್ಮನವಳನ್ನು ಹೊಯ್ದನು. ಪರಿಭವದ ಮರುಕದಲ್ಲಿ ಮುಳುಗಿ ಕೋಪದಲ್ಲಿ ಕಾಯ್ದುದವಳ ಮನಸ್ಸು. ಮಾಡುವುದೇನು? ಉಪಾಯಜ್ಞೆಯಾದುದರಿಂದ ಕೂಡಲೆ ಹೊರಟು ಹೋಗಿ ಕಟ್ಟೇಕಾಂತದಲ್ಲಿ ವೃಕೋದರನನ್ನು ಕಂಡಳು; ಕೀಚಕನಿಂದಾದ ಬನ್ನದ ಬವಣೆಯನ್ನು ನಿರೂಪಿಸಿದಳು. ಕರ್ತವ್ಯವನ್ನು ನಿರ್ಧರಿಸಿದ ಭೀಮಸೇನನು, ಇವನಿಗೇನು ದುಶ್ಶಾಸನನಿಗಿಂತಲೂ ಮೊದಲಿನೋಲೆ ಬಂದುದೇ! ಎಂದೆಣಿಸುತ್ತಾ, ಈ ಪೃಗಕ್ಕೆ ಬೀಸುವ ಬಲೆಯಂತಿರುವ ಉಪಾಯವನ್ನು ವಿಸ್ತರಿಸಿ ಸೈರಂಧ್ರಿಯನ್ನು ಕಳುಹಿದನು.

ಆ 'ಲತಾಲಲಿತೆ' ಮರುದಿವಸವೂ 'ಕೀಚಕನಲ್ಲಿಗೆಯ್ದಿದಳು.' 'ಕಾಮನೊಂದು ಕೆಯ್ಸೆರೆಯೆನಿಪ–ಅಂಗರಾಗ'ವನ್ನಿತ್ತಳು. ಅಂಗರಾಗದೊಡನೆ ಆಕೆಯ ಮೊಗರಾಗವೇರಿದುದನ್ನು ಕಂಡ ಕೀಚಕನ ಆಸೆಯ ಕುಡಿ ಚಿಗುರಿತು. 'ಅನರಿಯದೆ ನಿನ್ನೆ ನೋಯಿಸಿದೆ'ನು; 'ಇಂದು–ಎನಗೆ–ಎಂಬುದಂ' ಎನ್ನು, ಎಂದು ಕಾಲ್ಗೆರಗಿದನು. 'ನಿನಗೆ–ಇಂತಿನಿತೊಂದು–ಒಲವುಳ್ಳೊಡೆ–ಒಲ್ಲೆನೇ'? ಎಂದು ವಲ್ಲಲನ ಸೂಚನೆಯಂತೆ 'ನಂಬೆ ನುಡಿದು ವಿರಾಟನ ನಾಟಕಶಾಲೆಯ'ನ್ನು ಸಂಕೇತ ಸ್ಥಾನವನ್ನಾಗಿ ಸೂಚಿಸಿ ಹೊರಟುಹೋದಳು. ಸಂಜೆಯ ಸಮಯದಲ್ಲಿ ಎಡೆವಡೆದು ಆ ಸುದ್ದಿಯನ್ನು ಭೀಮನೊಡನೆಂದಳು. ವಲ್ಲಲನು 'ಬಾಹುಯುದ್ಧಸನ್ನದ್ಧನಾಗಿ ಕಲಿಗಂಟಕ್ಕಿ ಗಂಡುಡೆಯುಮಂ–ಉಟ್ಟು

ಪೊ'ದನು; 'ಗುಣಣೆಯ ಬಾಗಿಲೊಳ್ ದ್ರೌಪದಿಯನಿರಿಸಿ ವೀರಶ್ರೀಯ ವಿವಾಹಮಂಟಪಮಂ ಪುಗುವಂತೆ—ಒಳಪೊಕ್ಕ'ನು. ಇರುಳಾದೊಡನೆ ಸುರರಾಜ್ಯವಾಯಿತೆಂದು ಆನಂದಪರವಶನಾದ ಕೀಚಕನು ಮೊದಲೆ ನಾಟಕಶಾಲೆಯನ್ನು ಹೊಕ್ಕು ನಿರೀಕ್ಷಿಸುತ್ತಿದ್ದನು. ಕಟ್ಟಕಡೆಗೊದಗಿದ ಕಾಲ ಸದ್ದನ್ನು ಕೇಳಿ ಅವನೆದೆಯರಳಿತು. ಮೆಲ್ಲನೆ ಹತ್ತಿರಕ್ಕೆ ಹರಿದನು; 'ಓಪಳೆಗೆತ್ತು ಭೀಮನಂ' ತಡವರಿಸಿದನು. 'ನುಡಿಯದೆ ಕೆಮ್ಮನಿರ್ಪ—ಇರವಿದಾವುದು' 'ಕಾರಣವಾವುದೀ ಮೊಗಂಗುಡದಿರವಿ'ಗೆ? 'ಇಂತು ಕಣ್ಬಡಿಗರಪ್ಪರೆ ಮಾನಸರಪ್ಪರೆಂದು ಮೆಳ್ಪಡೆ ನುಡಿದು ಎಯ್ದೆವಂದ'ನು; 'ಮುಸುಕಂ ತೆಗೆದ'ನು. ಮರುಮಾತೇಳಲಿಲ್ಲ. 'ಆಗಡೆ ಮೇಲೆವಾಯ್ದು' ಆ ಬಲ್ದಡಿಗನು ಈ ದಡಿಗನನ್ನವುಕಿ ಹಿಡಿದನು. ಹೆಂಗುಸಿನ ಹಿಂಗಾವಲಾದ ಗಂಧರ್ವನಿವನು ಎಂದೆಣಿಸಿದ ಕೀಚಕನಪ್ಪಳಿಸಿದನು. ಮಲ್ಲಾಮಲ್ಲಿಯಾಯಿತು; 'ಪಲವುಂ ಗಾಯಂಗಳೊಳ್—ಆಯಂದಪ್ಪದೆ' ಹೆಣಗಿದರು. ಸಮಾನಬಲದವರಾದುದರಿಂದ ಏರಿಳಿತವಿಲ್ಲದೆ ಹಿರಿದು ಹೊತ್ತು ಹೆಣಗಾಡಿದರು. ವಲ್ಲಲನುಸಿರು ನೀಳವಾಗಿ ಎಳೆದೊಯ್ಯುತ್ತಿತ್ತು; ಕೀಚಕನದು ಉಬ್ಬಸವಾಗಿ ಮಾರ್ಪಟ್ಟುದು. ಮತ್ತೆ ತಡೆಯುಂಟೆ ?—ವಲ್ಲಲನು ಪಡಿಮಲ್ಲನನ್ನು 'ನುಚ್ಚುನೂರಪ್ಪಿನಂ—ಅಪ್ಪುಂಕಿ ಪಿಡಿದ'ನು; 'ಬೀಸಿ ಗುಣಣೆಯ ಕಂಭಂಗಳೊಳಂ ಕೇರ್ಗಳೊಳಂ—ಆಸ್ಫೋಟಿಸಿ ತಾಟಿಸಿದ'ನು. 'ಬಿಸುನೆತ್ತರ್ ಸೆಣಸಡಗೆಲ್ವು ಸಮಸ್ತಂ ಸುರಿ'ದು ಸೋರಿಹೋಯಿತು; 'ತೀವಿದ ಗುಳ್ಳೆಯ ಪಸುಂಬೆಯುಂ ಸೋರ್ಚಿದಂತೆ' ತೊಗಲೊಂದುಳಿದ ಕೀಚಕನ ಮೈ ಭೀಮನ ಕೈಯ್ಯೆಲ್ಲಾಯಿತು. ನಾಟಕಶಾಲೆಯಲ್ಲೊಂದು ಅಪೂರ್ವ ನಾಟಕವೂ ಕಡೆಗಂಡುದು. ವಲ್ಲಲನು ತನ್ನ ಚೌಕಿಗೆಯತ್ತ ಸಾರಿದನು.

'ನಿರ್ಬಂಧಂ ಬೇಡ'; ಅಳುಪಿದರೆ ಸಾವೆ, ಎಂದರೂ ಬಗೆಯದೆ ಕಾಮಾಂಧನಾದ ಕೀಚಕನು ಕಾಡಿ ಗಂಧರ್ವರಿಂದಳಿದನು; ನನಗೆ ದೂರೊಂದಾದುದು;—ಎಂದು ಸೈರಂಧ್ರಿ ಸಾರಿದಳು. ಆ 'ಗಗ್ಗರಿಕೆಗೊಳ್ವ ಸರಮಂ ಕರ್ಣಪರಂಪರೆಯಿಂ' ಕೇಳಿ ಉರಿದೆದ್ದ ಸಿಂಹಬಲನ ತಮ್ಮಂದಿರ್ಕೈ ತಂದರು. ಇದೆಲ್ಲ ಈ ಡಾಮರಡಾಕಿನಿಯಿಂದಲೇ ಆಯಿತು. 'ಈಕೆಗಂ—ಎಮ್ಮಣ್ಣಂಗಂ—ಒಂದೆ ವಿಧಿಯಂ ಮಾಳ್ಪೆ'ವೆಂದು ಅವಳನ್ನು ಹಿಡಿದು

ಮುಂದಿಟ್ಟುಕೊಂಡು ಮಸಣದ ದಾರಿವಿಡಿದರು. ಆ ಕಳಕಳವನ್ನು ಕೇಳಿದ ಭೀಮನೂ ತಲೆಮರೆಯಿಸಿ ಆ ಗೊಂದಣಿಯನ್ನೇ ಕೂಡಿದನು. ಮಸಣದ ಬೇಲಿಯನ್ನು ಮುಟ್ಟದೊಡನೆ ಸಂದಣಿಯೊಳಗೆ ಕೋಲಾಹಲವಾಯಿತು. 'ಬಾಳೆಯ ಚಿಲ್ವನಪ್ಪ ಬನಮಂ ಕಾಡಾನೆ ಪೊಯ್ದಂತೆ ಪೊಯ್ದ'ನು; 'ನೀಚ ಕೀಚಕನಿಕಾಯ ಧ್ವಂಸನಂ ಮಾಡಿದ'ನು. ಸೂರ್ಯೋದಯವಾದೊಡನೆ, ಕೇರಿಕೇರಿಯಲ್ಲಿ ಮನೆಮನೆಯಲ್ಲಿ ಗಂಧರ್ವರಿಂದ ಕೀಚಕರಳಿದರೆಂಬ ಸುದ್ದಿ ಹಬ್ಬತೊಡಗಿತು. 'ಇದೇಂ ಸಂಗಡ ಮಿಳ್ತುವಾಯ್ತೆ' ಎಂದು ಕೆಲವರಚ್ಚರಿಗೊಂಡರು. ಪರಸ್ತ್ರೀಕಾಮುಕನಿಗೆ ಹಾಗಾಗದೆ ಮತ್ತೆ ಹೇಗಾಗಬೇಕೆಂದರು ಕೆಲವರು. ಇಂದು ನಮ್ಮರಸನ ಬಲಗೈಯೊಂದು ಉಡಿಮುದೆಂದರು ಕೆಲವರು. ದೊರೆಗಾಗಿ ಹಲವರು ಕಳವಳಿಸಿದರು. ಆದರೆ ಸತ್ತವರಿಗಾಗಿ ಯಾರ ಬಾಯಲ್ಲಿಯೂ ಹಾ! ಎಂಬ ಮರುಕದ ಮಾತು ಮೂಡದಾಯಿತು. ಕೆಲವರು 'ಇವನಾ ರಾವಣನಿಂ ಪಿರಿಯನೆ?' ಮಾಡಿಮುದನ್ನುಂಡನು, ಎಂದರು; ಶುಚಿಯಲ್ಲದವನ ಗಂಡಿನಿಂದೇನು, ತೊಂಡಿನಿಂದೇನು, ಎಂದು ನೀಕರಿಸಿದರು. ಜನರ ಆ ಗುಜುಗುಜು ಮಾತು ಅರಮನೆಯೊಳಗೂ ಸುಳಿಯಿತು. ತಮ್ಮನ ಸಾವನ್ನರಿತ ಮಹಾದೇವಿಗೆ ಸೈಸಲಾರದ ಮರುಕವಾಯಿತು. ಮಾಡುವುದೇನು? 'ಪೇಡಿ ಸತ್ತಂತೇನುಮಂ–ಎನಲರಿಯದೆ' ನಾಚಿದಳು. 'ಮೂಗಳ್ಕಿಯ'ನ್ನತ್ತು ಕುದಿಪವನ್ನೊಳಗೊಳಗೇ ಇಂಗಿಸಿಕೊಂಡಳು.

## ಗ್ರಹಣಮೋಕ್ಷ

ವಿರಾಟನರಮನೆಯಲ್ಲಿ ನಡೆದ ಈ ಗುಪ್ತವಸ್ತುವಾದ ನಾಟಕದಂದವನ್ನು, ಬೇಹಿಗರೈದಿ ದುರ್ಯೋಧನನೊಡನೆ ಬಿನ್ನಯಿಸಿದರು. ಕುರುರಾಜನು ವಿಚಾರದ ತಿರುಳೆನ್ನಿಸಿದ ಗಾಂಗೇಯನ ಮುಖವನ್ನೀಕ್ಷಿಸಿದನು. ಗಂಧರ್ವರಿಂದ ಕೀಚಕನು ಹತನಾದನೆಂಬುದು ಎಣಿಕೆಗೊಪ್ಪದ ಮಾತು. 'ಭೀಮನಲ್ಲದೆ ಸಂದ ಸಿಂಹಬಲನಂ ಕೊಲ್ವನ್ನರಾ'ರು? 'ಕೀಚಕ ಭೀಮ ಶಲ್ಯ ಬಲದೇವರ್ಕಳ್ ಸಮಾನರ್ಕಳೆ'ಂಬುದು ಪ್ರಸಿದ್ಧವಲ್ಲವೆ? ಅದರಿಂದ, ಆ ನಾಟಕಶಾಲೆಯಲ್ಲಿ ನಡೆದುದು ಗಂಧರ್ವ ಗಾನನರ್ತನಗಳಲ್ಲ; ಭೀಮನ ಸಂಗೀತ ತಾಂಡವಗಳೇ ಸರಿ. ಸೈರಂಧ್ರಿಯಾದ ಪಾಂಚಾಲಿಯಲ್ಲಿ ಕೀಚಕನು ಕಣ್ಣೂರಿದನು; ಭೀಮನವನನ್ನು ಮಣ್ಣೂರಿಸಿದನು; ಎಂದು

ತನ್ನಭಿಪ್ರಾಯವನ್ನರುಹಿದನು. ಆ ನುಡಿಗೆಲ್ಲರೂ ಸರಿಯೆಂದು ಸೈಗುಟ್ಟಿದರು. ಕೌರವನು ರಾಜಕಾರ್ಯವನ್ನು ಭಾವಿಸತೊಡಗಿದನು:— ಕೀಚಕನಳಿದ ವಿರಾಟರಾಜಧಾನಿಗೆ ದಾಳಿಗೆಯ್ದು ತುರುಸೆರೆವಿಡಿದಲ್ಲಿ ಪಾಂಡವರಿದ್ದರೆ 'ಆಜಿರಂಗದೊಳ್' ತಲೆದೋರದಿರಲೊಲ್ಲರು. ಅಜ್ಞಾತವಾಸದ ಗಡು ಇನ್ನೂ ಕಡೆಗಂಡಿಲ್ಲವಷ್ಟೆ. ಪಾಂಡವರನ್ನೀಗಲೆ ಕಂಡುಹಿಡಿದರೆ, ಹೋರಾಟವೇ ಬೇಡ; ಧರ್ಮರಾಜನ ಮಾತನ್ನೆತ್ತಿದರೆ ಏಡಿಯ ಕಾಲನ್ನೇಡಿಗೇ ಚುಚ್ಚಿದಂತಾಗುವುದು ಎಂದೆಣಿಸಿದನು. ಆಮೇಲೆ 'ಗೋಗ್ರಹಣ ಪ್ರಪಂಚಮನೆ ನಿಶ್ಚಯಿಸಿ'ದನು. 'ವಿರಾಟನ ದಾಯಿಗಂ ತ್ರಿಗರ್ತಾಧೀಶಂ ಸುಶರ್ಮನುಮಂ ನಾಲ್ಸಾಸಿರ ರಥಂಬೆರಸು ದಕ್ಷಿಣ ದಿಶಾಭಾಗಕ್ಕೆ' ಕಳುಹಿದನು. ಅವನೆಯ್ದಿ ವಿರಾಟನ ತುರುಗಳನ್ನು ಸೆರೆವಿಡಿದನು.

ಅದನ್ನರಿತ ವಿರಾಟನೆದೆ ಕಿಚ್ಚಾಯಿತು. ಮಗನಾದ ಉತ್ತರನನ್ನು 'ಪೊಳಲ್ಗೆ ಕಾಪಿರಿಸಿ'ದನು; ಹವಣುಳಿದ ಸೇನೆಯೊಡಗೂಡಿ ನೆಲನದಿರುವಂತೆ ಹಗೆಗಳೊಡ್ಡಿಗಿದಿರಾದನು. ಆಗ ಪಾಂಡುಪುತ್ರರಯ್ವರೂ ಒಡಗೂಡಿ ಇದು ತುರುವಿಡಿವ ಗುರಿಯಲ್ಲ; ನಮ್ಮನ್ನರಿಯಲೆಂದು 'ವೈರಿಯ ಮಾಡಿದ ಗೊಡ್ಡ'ವು. ಆಗಲಿ; ಅಜ್ಞಾತವಾಸಾವಧಿ ತುಂಬಿಹೋದುದರಿಂದ ತಲೆ ಮರಸಲಾಗದೆಂದು ನಿ ರ್ಧ ರಿ ಸಿ ದ ರು. 'ವಿಕ್ರಮಾರ್ಜುನನಂ ಪೆರಗಣ ಕಾಪಿಂಗಿರಲ್ವೇಳ್ದು' ವಿರಾಟನೊಡಗೂಡಿ ಹೋಗಿ ತಾಗಿದರು; ಆ ಸುಶರ್ಮನನ್ನು ಹಿಡಿದು ಬನ್ನಗೊಳಿಸಿ ಗೋಮಂಡಲವನ್ನು ಬಿಡಿಸಿದರು. ಆಗ, ವಿರಾಟನ ರಾಜ್ಯಾಂಗವ್ಯವಸ್ಥೆ ಒಂದೆಡೆ ಹೊಲಿವಲ್ಲಿ ಇನ್ನೊಂದೆಡೆ ಹರಿವ ಚಿಂದಿಬಟ್ಟೆಯಾಗಿತ್ತು. ತೆಂಕಣ ಪಕ್ಕದಲ್ಲಿ ಗೆಲವಾದರೇನು? ಸಮಸ್ತ ಸಾಧನವೆರಸಿದ ಸುಯೋಧನನು ಬಡಗಣ ಭಾಗದಲ್ಲಿ ಗೋಗ್ರಹಣವೆಸಗಿದನು. ಗೋವಳರ ಹೆಣಗಾಟವು ಭೀಷ್ಮಾದಿ ವೀರರಿದಿರಿನಲ್ಲಿ ಸಾಗುವುದೆ? ಹೆಣಗಳ ಕಾಟವೇ ಆಯಿತದು. ಕಾಡುಮೇಡುಗಳು 'ದೇಗುಲಕೆ ಪೆರ್ಮರನಂ ಕಡಿದಂತೆ' ತೋರಿದುವು. ಆಗ ಗೋವಳನೊಬ್ಬನು ತನ್ನವರ ಬವಣೆಯನ್ನೀಕ್ಷಿಸಿ ಅರಮನೆಗೋಡಿದನು. ತೆಂಕಣ ದಿಕ್ಕಿಗೆಯ್ದಿದ ವಿರಾಟನು ಹಿಂದಿರುಗದುದರಿಂದ, ಉತ್ತರನೊಡನೆಲ್ಲವನ್ನೂ ವಿಸ್ತರಿಸಿದನು.

ಉತ್ತರನೆಂದರೆ ಅಪೂರ್ವವಾದೊಂದು ವ್ಯಕ್ತಿ. ಗೋವಳನ ಗೋಳನ್ನು

ಕೇಳಿದೊಡನೆ ಅದೊಂದು ದೂಪಾದನವನು. ಭತ್ತವನ್ನು ಕೆದರಿದರೆ ಹೊದ ಳಾಗುವಂತಿತ್ತವನ ಮೋರೆ. 'ಎನ್ನ–ಇದಿರ್ಗೆ ರಾವಣ ಕೋಟಿ'ಯೂ ಕೀಟಗಳೆಂದ ಮೇಲೆ ಗಾಂಗೇಯನೆಂದರೇನು ? ಸುಯೋಧನನೆಂದರೆಲ್ಲಿ ? 'ಇನ್ನೆನಗೆ ಸಾರಥಿಯಪ್ಪನ'ನ್ನೀಗಳೆ ತನ್ನಿರಿ, ಎಂದು 'ಪೊಚ್ಚರಿಸಿ'ದನು. ಹೊಳಲ ಹೊರಗಿನ ಕಾಪಿನಲ್ಲಿದ್ದ ವಿಕ್ರಮಾರ್ಜುನನು ಆ ಮಾತನ್ನು ಕೇಳಿದನು. ಸೈರಂಧ್ರಿಯೊಡನೆ, ಉತ್ತರನಿಗೆ ತಾನು ಸಾರಥಿಯಾಗುವಂತನು ಗೊಳಿಸು, ಎಂದು ಸೂಚಿಸಿದನು. ಅವಳು ಉತ್ತರನಲ್ಲಿಗೆಯ್ದಿದಳು. 'ನಿನ ಗಾಜಿರಂಗದೊಳ್ ಸಾರಥಿಯಪ್ಪೊಡಪ್ಪುದು ಶಿಖಂಡಿಯೆ' ಎಂದಳು. ಕೂಡಲೆ 'ತನ್ನ ತಂಗೆಯನಟ್ಟ' ಬೃಹಂದಳೆಯನ್ನವನೇ ಬರಿಸಿಕೊಂಡನು. ವಿರಾಟ ನಂದನನೇರಿದೊಡನೆ, ಆ ಸಾರಥಿಯ ಕೆಯ್ಮೆಗೊಳಗಾದ ತೇರು ಮನಃಪವನ ವೇಗದಿಂದ ಹರಿಯಿತು. 'ಉತ್ತರನ ಕಣ್ಗೆ ಸುಯೋಧನ ಸೈನ್ಯಸಾಗರ'ದ ಕಲ್ಲೋಲಮಾಲೆಗಳು ತೋರಲಾರಂಭಿಸಿದುವು. ಗಂಡುತನಕ್ಕಾಸರೆಯಾಗಿದ್ದ ಎದೆ ಹಿಂಡಿಯಾಯಿತು. ನೋಡಲಿಕ್ಕೇ ಅಳವಲ್ಲದ ಸೈನ್ಯವಿದನ್ನು 'ಆಂತಿರಿದಾರ್ ತವಿ'ಸುವವರೆಂದು ಮಂತರಿಸಿಕೊಂಡ ಉತ್ತರನೆದೆಯ ನಾಚಿಕೆಯೂ ಆರಿಹೋಯಿತು. ಮೆಲ್ಲನೆ 'ರಥದಿಂದಿಳಿದೋಡಿದ'ನು. ಸಾರಥಿ ರಥವನ್ನು ನಿಲ್ಲಿಸಿದನು; ಹಿಂಬಾಲಿಸಿದನು. ತನ್ನ ನಿಜವನ್ನೊರೆದನು; ವಿಶಿಷ್ಟವಾದೊಂದು ಶಮೀದ್ರುಮದಲ್ಲಿಗೆ ಆ ಹೇಡಿಯನ್ನೊಯ್ದನು. ತಂತಮ್ಮ ಮೊಸಲುಗೈದುಗಳನ್ನು ಆ ಮರದಲ್ಲಿ ಕಟ್ಟಿಟ್ಟುದನ್ನೊರೆದು, ಆತನಿಂದ ಅವೆಲ್ಲವನ್ನೂ ನೀಡಿಸಿಕೊಂಡನು. ಹಗೆಗಳ 'ಗಂಟಲ ಬಳೆಯನೊಡೆದು ಕಳೆ'ವಂತೆ 'ಮುಂಗೆಯ್ಯ ಬಳೆಗಳ'ನೊಡೆದು ಕಳೆದ 'ಪಡೆಮೆಚ್ಚೆ ಗಂಡ'ನು ಉತ್ತರನ ಸಾರಥ್ಯದೊಡನೆ ರಥವನ್ನೇರಿ ಕುರುಧ್ವಜನಿಗಿದಿರಾದನು. ಆ ನೋಟವನ್ನೀಕ್ಷಿಸಿದೊಡನೆ ಹಗೆಗಳೊಡ್ಡು 'ಗಾಳಿಗೊಡ್ಡಿದ ಸೊಡರಂತೆ ನಡನಡುಗ'ತೊಡಗಿತು. ಅವರ ಅಜ್ಞಾತವಾಸದ ಅವಧಿ ಮುಂದೆ ಬರಬೇಕಷ್ಟೆ, ಎಂದೆಣಿಸಿದ 'ಸುಯೋಧನಂಗೆ' ಲೆಕ್ಕದಂಕೆಯೊಡನೆ 'ಗಾಂಗೇಯ ನಿಂತೆಂದ'ನು. 'ಅವಧಿಯ ಲೆಕ್ಕಮುಂ ನೆರಪಿ ನನ್ನಿಗೆ ಮಾಣದೆ ಕಾದಲೆಂದು ಬಂದವನಿವನರ್ಜುನ'ನೆಂಬುದನ್ನು ಕಡೆಗಣಿಸಬೇಡ. ಹಿಡಿದ 'ಗೋಸಿವಹವ'ನ್ನು 'ನೀನೊಡಗೊಂಡು ಪೋಗು.' 'ಅಂಗರಾಜ ಕೃಪ ಕುಂಭಜ ಪ್ರಮುಖ'ರಿಂದ ಕೂಡಿದ ನಾನೇ, 'ಕದನತ್ರಿಣೇತ್ರ'ನೊಡನೆ ಒಂದು ಕೈ

ನೋಡುವೆನು, ಎಂದನು. ಸುಯೋಧನನಿಗೊಪ್ಪಿಗೆಯಾಯಿತಾ ಮಾತು. 'ಪಿರಿದುಂ–ಆಕುಳಂಬೆರಸು ಗೋಕುಳಮಂ ಕೊಂಡು' ಧುರ್ಯೋಧನ ಪಾತ್ರವು ನೇಪಥ್ಯಾಭಿಮುಖವಾಯಿತು. ಭೀಷ್ಮಾದಿಗಳ ದಳದ ತೆರೆ ಮುಂದಾಯಿತು.

ಅಜ್ಞನ ಸೂತ್ರಧಾರಿಕೆಯ ಜಾಣ್ಮೆಯನ್ನು ತನಗನುವಾಗುವಂತೆ ಅರ್ಜುನನು ಮಾರ್ಪಡಿಸಿಕೊಂಡನು. ಉತ್ತರನೊಡನೆ ಸೂಚಿಸಿ ತೇರನ್ನಾ ಕಡೆಗೆ ತಿರುಗಿಸುವಂತೆ ಮಾಡಿದನು. ಕೌರವನನ್ನು 'ಮುಟ್ಟೆವಂದ'ನು, 'ತನ್ನ ಅಂಕದ ಅಂಬುಗಳೊಂದೊಂದರಲ್ ಒಂದೊಂದು ಲಕ್ಕೆ ಬಲಮುಂದು-ಅಳ್ಕಾ'ಡಿತು, ದುರ್ಯೋಧನನು ಸೋತೋಡಿದನು. 'ವಿದ್ವಿಷ್ಟವಿದ್ರಾವಣನು' ತುರುಗಳ ಸೆರೆಯನ್ನು ಬಿಡಿಸಿದನು. ಸೆರೆಯುಳಿದ ತುರುಗಳು ಹೊಳಲತ್ತ ಸಾರಿದುವು. ವಿಕ್ರಮಾರ್ಜುನನ ಸಾಹಸವನ್ನು ಕಂಡ ಕರ್ಣನು ಕಿಡಿಕಿಡಿಯಾದನು; 'ಗೋಗ್ರಹಣದಲ್ಲಿಯೆ ಭಾರತ'ವು ಸವೆದುದು, ಎಂಬಂತೆ 'ರೌದ್ರಶರಂಗಳಿಂ'ದೆಚ್ಚನು; 'ಯುದ್ಧದೊಳ್ ಸಮುಸಮನಾಗೆ ಕಾದಿದ'ನು. ಕಡೆಗೆ ಅರಿಗನ ಕೋಲು ಕರ್ಣನೆದೆಗೆ ಕೀಲಾಯಿತು. ಮೈಯೊಡನವನ ಗರ್ವವೂ ಜೋಲತೊಡಗಿತು. ಅದನ್ನರಿತ 'ಕುಂಭಸಂಭವ ನದೀಜಕೃಪ ಪ್ರಮುಖ ಪ್ರವೀರರ್ ಎಕ್ಕೆಕ್ಕೆ'ಯಾಗಿ ಮುಕ್ಕುರುಕಿದರು. ಅವರರಿಗಳೆಂದು, ಅರಿಗನೆದೆಯಲ್ಲಿ ಒಂದಿನಿಸು ಕಿನಿಸು ಗುಡಿಗಟ್ಟಿತು; ಹಿರಿಯರೆಂಬ ಕನಿಕರವು ಆ ಕಿನಿಸನ್ನು ಬಿಡಿಸಿತು. ಅದರಿಂದಲೆ ಸಮ್ಮೋಹನಾಸ್ತ್ರವನ್ನೆಚ್ಚನು. ಗುರಿ ವಿಡಿದ ಭೀಷ್ಮನು ಗುರಿವಿಡಿದಂತೆ; ಬಿಲ್ಲೋಜನು ಬೆರಗಾದಂತೆ; ಕೃಪನು ನಗುತ್ತಿದ್ದಂತೆ; ಹೆಚ್ಚೇನು, ರಣಾಂಕಣವೆಂಬುದೊಂದು ಚಿತ್ರಪಟದಂತಾಯಿತು. ಕದನತ್ರಿಣೇತ್ರನು 'ಅವರ ಶಶಿವಿಶದ ಯಶಃಪಟಂಗಳಂ ನನ್ನಿಪಟಂಗೊಳ್ವಂತೆ ಧ್ವಜಪಟಂಗಳಂ ಕೊಂಡ'ನು; ಹಾಗೆ 'ಗೆಲ್ಲಂಗೊಂಡು' ಉತ್ತರನೊಡನೆ ಹಿಂದಿರುಗಿದನು.

ಮೈಮರಸಿಕೊಂಡಿದ್ದ ಕಂಕಭಟ್ಟಾದಿಗಳೆಂದರೆ ಯಾರೆಂದು ಉತ್ತರನಿಂದ ವಿರಾಟನಿಗೆ ಗೊತ್ತಾಗುವಾಗ ಕೀಚಕ ನಿಪಾತನದ ಹೊಲಬೂ ಆಯಿತೆನ್ನುವ. ಆದರೂ ಅವನಿಗುಂಟಾದ ಆನಂದಕ್ಕೆ ಪಾರವಿಲ್ಲ. ತನ್ನ ಸಮಸ್ತ ವಸ್ತುಗಳನ್ನೂ ಧರ್ಮರಾಜನಿಗೊಪ್ಪಿಸಿ ಕಾಲ್ವಿಡಿದನು; ಗುರಿಯರಿ

ಯದ ತನ್ನಿಂದ ತನ್ನವರಿಂದೊದಗಿದ ತಪ್ಪುಗಳನ್ನು ಮರೆದನುಗ್ರಹಿಸ ಬೇಕೆಂದು ಬೇಡಿಕೊಂಡನು. ಯುಧಿಷ್ಠಿರನು ವಿರಾಟನನ್ನೆತ್ತಿದನು; ಸುರಿಯು ತ್ತಿದ್ದ ಕಣ್ಣೀರನ್ನೊರಸಿದನು. ನಿನ್ನ ನಿನ್ನವರ ತಪ್ಪೇನು? ಈಯೊಂದು ವರ್ಷದಲ್ಲಿ ಅಜ್ಞಾತರಾಗಿರುವೆವೆಂದು ದಾಯಾದರಿಗೆ ಕೊಟ್ಟ ಮಾತು ಸಫಲ ವಾಗಿ ನಾವು ಸತ್ಯವಂತರೆನಿಸಿದುದು ನೀನಿತ್ತ ಉದಾರಾಶ್ರಯದಿಂದ. ಅದ ರಿಂದ ನಾವೇ ನಿನಗೆ, ಜೀವಾವಧಿ ವರೆಗೆ ಮರೆಯಲಾರದ ಋಣಿಗಳಾಗಿರ ಬೇಕಾಗಿದೆ, ಎಂದನು. ವಿರಾಟನ ಬಾಡಿದ ಮೋರೆ ಮಿನುಗಲಿಲ್ಲ. ಮೆಯ್ದೋರದ ಮಾತಿನ ನೆರಳೊಂದು ಅವನ ಮುಖದಲ್ಲಿ ಅತ್ತಿತ್ತ ಸುಳಿಯು ತ್ತಿತ್ತು. ಧರ್ಮರಾಜನಿಗದು ಗೊತ್ತಾಗದಿರುವುದೆ?—ಕೀಚಕ ವ್ಯತಿಕರ ವನ್ನೆಣಿಸಿ ನೀನು ಕೊರಗುತ್ತಿರುವುದೆಂದು ತೋರುತ್ತಿದೆ. ಕೈಮೀರಿಹೋದ ಆ ಸಂಗತಿಗಾಗಿ ನೀನಿನ್ನೂ ಕರಗುವುದಾದರೆ ನಾವೂ ಮರುಗಬೇಕು. ಆ ಅಪ್ರತಿಮಮಲ್ಲನಿಗಳುಕಿಯೇ ಕೌರವರು ನಿನ್ನೀಮಂಡಲಕ್ಕೆ ತಲೆಯಿಕ್ಕಲಾರ ದಾಗಿದ್ದುದು. ಆತನ ಬಲವೇ ನಮ್ಮ ಅಜ್ಞಾತವಾಸಕ್ಕೂ ಆಸರೆಯಾದುದು. ಅಂಥವನ ಬೇರನ್ನೇ ಕಿತ್ತು ಬಿಟ್ಟುದೆಂದರೆ ನಮಗೇನು ಆನಂದದ ಸಂಗತಿ ಯೆಂದು ಭಾವಿಸಿದೆಯ? ಧರ್ಮಸಂಕಟದಲ್ಲಿ ಸಿಕ್ಕಿದಾಗ ಮಾಡುವುದನ್ನು ಮಾಡಲೇಬೇಕಾಗುತ್ತಿದೆ. ಕಳೆದುದಕ್ಕೆ ಕಳವಳಿಸಬಾರದು, ಎಂದನು. ವಿರಾಟನ ಮನಸ್ಸು ಶಾಂತವಾಯಿತು. 'ನೀಂ ದಯೆಯಿಂದಮಿಲ್ಲಿ' ಬಂದು ನೆಲಸಿದುದರಿಂದ ಕೃತಾರ್ಥನಾದೆನು. ನಿನ್ನ ಮನಸ್ಸಿನ ಕಸರಿಕೆ ಇಂಗಿತೆಂಬು ದರ ಸನ್ನೆಗಾಗಿ, 'ಎನ್ನ ತನೂಜೆಗಂಕದುತ್ತರೆಗೆ ವಿವಾಹಮಂಗಳಮನಿನ್ನ ಭಿಮನ್ಯುಗೆ ಮಾಳ್ಪುದು' ಎಂದು ಬೇಡಿಕೊಂಡನು. ಆ ಹೇಳಿಕೆ ಪಾಂಡವ ರೆಲ್ಲರಿಗೂ ಒಪ್ಪುಗೆಯಾಯಿತು. ಕೂಡಲೆ ದ್ವಾರಾವತಿಗೆ ದೂತರೈದಿದರು. ಗೋಗ್ರಹಣ ಮೋಕ್ಷದೊಡನೆ ಪಾಂಡವರಿಗೆ ಹಿಡಿದ ಗ್ರಹಣದ ಮೋಕ್ಷವೂ ಆಯಿತೆಂಬುದನ್ನರಿತ ಕೃಷ್ಣಾದಿಗಳ ಆನಂದಕ್ಕಳತೆ ಇಲ್ಲ. ಸುಭದ್ರಾಭಿಮನ್ಯು ಗಳೊಡನೆ ಯಾದವಬಂಧುಗಳೈತಂದರು. ಸಮಸ್ತ ವೈಭವ ಸಮ್ಮಿಳಿತವಾಗಿ ಉತ್ತರಾಭಿಮನ್ಯುಗಳ ಮದುವೆಯ ಮಂಗಳವಾಯಿತು. ಆಮೇಲೆ ಶ್ರೀಕೃಷ್ಣನೆ ಮೊದಲಾದವರು ಪುರಾಭಿಮುಖರಾದರು.

# ೨. ಮುದ್ರಾಮಂಜೂಷ ★ ★ ★ ★

## ಪರಿಚಯ

೧. ಹೊಯಿಸಣ ಕುಲಕ್ಕೆ ಸೇರಿದ ನಾರಾಯಣ ಎಂಬ ಹೆಸರಿನ ವಿದ್ವಾಂಸನು ಕ್ರಿ. ಶ. ೧೯ನೆಯ ಶತಮಾನದ ಪ್ರಾರಂಭಕಾಲದಲ್ಲಿ ಆಗಿಹೋದನು. ಇವನ ವಾಸಸ್ಥಳ ಮೈಸೂರು. ಆಗ ಮೈಸೂರು ದೊರೆಗಳಾಗಿದ್ದ ಶ್ರೀಕೃಷ್ಣರಾಜರ ಆಶ್ರಿತ ಪಂಡಿತನೀತ. ಕ್ರಿ. ಶ. ೧೮೨೩ ರಲ್ಲಿ ಇವನು ತನ್ನ ಗ್ರಂಥವನ್ನು ಬರೆದು ಮುಗಿಸಿರುವನು. 'ಮುದ್ರಾಮಂಜೂಷ'ದಲ್ಲಿ ಮಗಧರಾಜ್ಯದ ರಾಜದಾನಿ ಪಾಟಲೀಪುತ್ರದಲ್ಲಿ ಆಳುತ್ತಿದ್ದ ನಂದವಂಶದ ರಾಜರ ಆಡಳಿತ ನಷ್ಟವಾಗಿ, ಮೌರ್ಯವಂಶದ ರಾಜ್ಯ ಪ್ರತಿಷ್ಠಾಪನೆಯಾದ ಐತಿಹಾಸಿಕ ವಿಷಯವು ಕಥೆಯ ರೂಪದಲ್ಲಿ ಬೆಳೆದಿದೆ. ಇಲ್ಲಿಯ ಕಥಾಘಟನೆಗಳಿಗೆಲ್ಲ ಸೂತ್ರಧಾರಿ ಚಾಣಕ್ಯನೆಂಬ ಬ್ರಾಹ್ಮಣನು. ನಂದರಾಜರು ತನ್ನ ಅಪಮಾನಮಾಡಿದ ದ್ವೇಷಕ್ಕಾಗಿ, ಇವನು ಅವರ ವಂಶವನ್ನೇ ನಿರ್ಮೂಲಮಾಡಿ, ಮೌರ್ಯರಾಜಪುತ್ರನಾದ ಚಂದ್ರಗುಪ್ತನನ್ನು ಪಾಟಲೀಪುತ್ರದ ಸಿಂಹಾಸನದ ಮೇಲೆ ಕುಳ್ಳಿರಿಸುವನು. ಕಥೆಯು ತುಂಬ ಮನೋಹರವಾಗಿದೆ. ಭಾಷೆ ಹಳಗನ್ನಡದ ಪ್ರಭಾವಕ್ಕೆ ಒಳಗಾದ ಹೊಸಗನ್ನಡ ಗದ್ಯ.

೨. ನಂದರಾಜರೆಲ್ಲ ಸತ್ತುಹೋದಮೇಲೆ, ಅವರ ಅತ್ಯಂತ ವಿಶ್ವಾಸದವನಾದ ಅಮಾತ್ಯರಾಕ್ಷಸನೆಂಬವನು ರಾಜಧಾನಿಯನ್ನು ಬಿಟ್ಟು, ಪರ್ವತರಾಜನ ರಾಜಧಾನಿಯಲ್ಲಿ ಹೋಗಿ ಇರುತ್ತಾನೆ. ಈತನ ನಿಷ್ಠೆ, ಕುಶಲಕಾರ್ಯ, ರಾಜಕೀಯ ಚಾತುರ್ಯ ಇವುಗಳನ್ನು ಚಾಣಕ್ಯ ಪೂರ್ಣವಾಗಿ ಅರಿತುಕೊಂಡಿದ್ದನು. ತಾನು ಪ್ರತಿಷ್ಠಾಪಿಸಿದ ಮೌರ್ಯ ಚಂದ್ರಗುಪ್ತನ ರಾಜ್ಯಕ್ಕೆ ರಾಕ್ಷಸನನ್ನೇ ಮುಖ್ಯಾಮಾತ್ಯನನ್ನಾಗಿ ಮಾಡಬೇಕೆಂಬುದು ಅವನ ಉತ್ಕಟ ಇಚ್ಛೆ. ಸಾಮಾನ್ಯ ಪ್ರಯತ್ನಗಳಿಂದ ರಾಕ್ಷಸನು ತನ್ನ ವಶವಾಗನೆಂಬುದು ಚಾಣಕ್ಯನಿಗೆ ಚೆನ್ನಾಗಿ ಗೊತ್ತು. ಆದುದರಿಂದ ರಾಜಕೀಯ ತಂತ್ರಗಳನ್ನು ಒಡ್ಡಿ ಅವನನ್ನು ಹಣ್ಣುಮಾಡಿ, ತಾನಾಗಿಯೆ ಅವನು ಪಾಟಲೀಪುತ್ರಕ್ಕೆ ಬರುವಂತೆ ಮಾಡಬೇಕೆಂದು ಚಾಣಕ್ಯ ಅನೇಕ ಚಟುವಟಿಕೆಗಳನ್ನು ನಡೆಯಿಸಿದನು. ಅಂತಹ ಚಟುವಟಿಕೆಗಳ ವಿವರದಿಂದ ಕೂಡಿದ ಒಂದು ಭಾಗವನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

* * * *

# ರಾಕ್ಷಸಮುದ್ರಿಕಾಗ್ರಹಣವು

ಅನಂತರದಲ್ಲಿ ಮೊದಲು ಪಾಟಲೀಪುರಮಂ ಬಿಟ್ಟು ಹೋಗಿರುವ ರಾಕ್ಷಸನ ವರ್ತಮಾನಮಂ ತಿಳಿಯಲೋಸುಗ ಚಾಣಕ್ಯರಿಂದ ನೇಮಿಸಲ್ಪಟ್ಟ ಗೂಢಚಾರರೊಳಗೆ ಸಮಿದ್ಧಕನೆಂಬ ಒಬ್ಬ ಚರನು ಅಲ್ಲಲ್ಲಿ ಅಮಾತ್ಯ ನಿರುವಿಕೆಯಂ ಹುಡುಕುತ್ತ ಎಲ್ಲಿಯೂ ಗೊತ್ತಾಗದಿರಲು, ಕಡೆಗೆ ಪರ್ವತ ರಾಜನ ಪಟ್ಟಣಕ್ಕೆ ಬಂದು ಮಲಯಕೇತುವು ರಾಕ್ಷಸನಂ ಸನ್ಮಾನಗೊಳಿಸಿ ಆತನಿಗೆ ತನ್ನ ಬಳಿಯಣ ಸರ್ವಾಧಿಕಾರಮಂ ಕೊಟ್ಟು ಚಿತ್ರವರ್ಮಮುಖರಾದ ಅರಸುಗಳಿಗೆ ಆತನ ಅಪ್ಪಣೆಯ ಮೇರೆಗೆ ನಡಯುವಂತೆ ಕಟ್ಟುಮಾಡಿ, ಚಂದ್ರುಗುಪ್ತನ ಮೇಲೆ ಕಾರ್ಯಭಾಗಕ್ಕೆ ಪಾಟಲೀಪುರಮಂ ಮುತ್ತುವು-ದಕ್ಕೋಸ್ಕರ ಮೊದಲಿನಂತೆ ಸೇನೆಗಳು ಸಿದ್ಧವಾಗಲೆಂದು ಆಸ್ಥಾನದಲ್ಲಿ ಹೇಳಿದ ವೃತ್ತಾಂತಮಂ ತಿಳಿದುಕೊಂಡು, ಹಿಂದಿರುಗಿ ಕುಸುಮಪುರಕ್ಕೆ ಬಂದು ಚಾಣಕ್ಯರಂ ಕಂಡು ಕೈಮುಗಿದು—ಸ್ವಾಮಿಯವರ ಅಪ್ಪಣೆಯ ಮೇರೆಗೆ ರಾಕ್ಷಸನ ವೃತ್ತಾಂತಮಂ ತಿಳಿಯುವುದಕ್ಕೆ ಹೋಗಿದ್ದ ಸಮಿದ್ಧಕನೆಂಬ ಗೂಢಪುರುಷನು ನಾನು. ಅಪ್ಪಣೆಯಾದರೆ ವಿಜ್ಞಾಪಿಸುವೆನು ಎನಲು, ಆಗ ಚಾಣಕ್ಯನು ರಹಸ್ಯದಲ್ಲಿ ಕುಳಿತು ಮತ್ತೇನಯ್ಯಾ? ಎನಲು ಆ ಸಮಿದ್ಧಕನು ತಾನು ತಿಳಿದು ಬಂದಿದ್ದ ರಾಕ್ಷಸನ ವರ್ತಮಾನವೆಲ್ಲಮಂ ಉಸುರಲು, ಅದಂ ಕೇಳಿ ಚಾಣಕ್ಯನು ತನ್ನ ಮನಸ್ಸಿನಲ್ಲಿ—ಈ ರಾಕ್ಷಸನು ತಾನು ಚಂದ್ರಗುಪ್ತ ನಿಗೆ ಮಾಡಿದ ಕಪಟೋಪಾಯಂಗಳೆಲ್ಲವೂ ಭಗ್ನಮಾಗುತ್ತಿರಲು ಮತ್ತೂ ದ್ವೇಷಮಂ ಸಾಧಿಸುವೆನೆಂದು ಪರ್ವತರಾಜಸೂನುವನ್ನಾಶ್ರಯಿಸಿ ಅವನಂ ಒಡಂಬಡಿಸಿ ಮೌರ್ಯಪುತ್ರನ ಮೇಲೆ ದಂಡೆತ್ತಿ ಬರುತ್ತಿದ್ದಾನೆ. ಹಾಗಾ ದರೂ ನಾನು ಅವನ ಯತ್ನಮಂ ಸಾಗಿಸುವವನಲ್ಲ. ಈ ಭಾಗದಲ್ಲಿ ಇನ್ನೂ ಮಾಡಬೇಕಾದ ವ್ಯವಸಾಯಗಳೆಲ್ಲಮಂ ಮಾಡಲಿ. ಪಾಟಲೀಪುರದ ಸಮಿ ಪಕ್ಕೆ ಬರಲಿ. ಮಲಯಕೇತುಮಂ ನಿರಾಕರಿಸಿ ಅರಣ್ಯದಲ್ಲಿರುವ ಗಜಮಂ ದಾಪಿನಾನೆಗಳಿಂದ ವಂಚನೆಗೆಯ್ಸಿ ಹಿಡಿತಂದು ಪಟ್ಟದಾನೆಯಂ ಮಾಡು ವಂತೆ ನಾನು ವಿರಚಿಸುವ ಉಪಾಯಕೌಶಲ್ಯವು ಅವನಂ ತಾನಾಗಿ ಇಲ್ಲಿಗೆ ಬರುವಂತೆ ಮಾಡೀತು, ಎಂದು ನಿಶ್ಚಯಿಸಿ ಪುನಃ ಅದೇ ಗುಪ್ತಚರನಂ ಕುರಿತು—

ಎಲೈ ಸಮಿದ್ಧಕನೇ, ನೀನು ಆ ರಾಕ್ಷಸನಿಗೆ ತಿಳಿಯದಂತೆ ಅಲ್ಲಿಯೇ ಇದ್ದುಕೊಂಡು, ಆ ಬಳಿಯಲ್ಲಿ ನಡೆದ ವಿಶೇಷವರ್ತಮಾನಗಳನ್ನು ಅರಿತು ಬಂದು ತಿಳುಹಿಸುವವನಾಗು ಎಂದು ಹೇಳಿ, ತಿರಿಗಿ ಅವನಂ ಅಲ್ಲಿಗೇ ಕಳುಹಿಸಿ ಆಸ್ಥಾನಕ್ಕೈತಂದು ಕುಳ್ಳಿರಲು, ಆ ಸಮಯದಲ್ಲಿ ದೂತರು ಬಂದು ಚಾಣಕ್ಯರಿಗೆ ಕೈಮುಗಿದು—

ಸ್ವಾಮಿ, ಮೊದಲು ಅಪ್ಪಣೆಯಾಗಿದ್ದ ಮೇರೆಗೆ ಸೇನೆಗಳೆಲ್ಲವೂ ಗಣತಿಯಾಗಿ ಇಂದಿನವರೆಗೆ ಸಂಬಳಗಳು ಸಂದು ಇವೆ. ಎಂದಿನಂತೆ ಬಾಗು-ರಾಯಣಾದಿಸೇನಾನಾಯಕರು ವೇತನಗಳಂ ಪರಿವಾರಜನಕ್ಕೆ ಕೊಡಿಸುವುದಕ್ಕೆ ಈ ವರೆಗೂ ಅವರೊಬ್ಬರೂ ಬಂದುದಿಲ್ಲ. ಅವರ ಜೀತಗಳು ಕಟ್ಟಿ ಇರಿಸಲ್ಪಟ್ಟಿವೆ. ಇದಕ್ಕೆ ಅಪ್ಪಣೆ ಏನು ? ಎನಲು, ಅದಂ ಕೇಳಿ ಚಾಣಕ್ಯನು ಕೋಪಿಸಿಕೊಂಡವನಂತೆ ಕಪಟಕ್ರೋಧಮಂ ನಟಿಸಿ ಅಲ್ಲಿರುವ ಅಧಿಕಾರಿಗಳ ಮುಖಮಂ ನೋಡಿ—

ಎಲೈ ಉದ್ಯೋಗಸ್ಥರುಗಳಿರಾ, ಈ ದೂತರು ಹೇಳಿದ ಮಾತುಗಳಂ ಕೇಳಿದಿರಾ? ಈ ಪುರವು ಚಂದ್ರಗುಪ್ತನ ಸ್ವಾಧೀನಮಾದುದು ಮೊದಲುಗೊಂಡು ಇಂದಿನವರೆಗೂ ಬಾಗುರಾಯಣ-ಭದ್ರಭಟಾದಿ ಚಮೂಪತಿಗಳು ಬಂದು ರಾಜದರ್ಶನಮಂ ಮಾಡಿದುದಿಲ್ಲ. ಅವರೆಲ್ಲರೂ ಮನಸ್ಸಿನಲ್ಲಿ ಏನೋ ಯೋಚಿಸಿಕೊಂಡು ನಮ್ಮನ್ನು ಲಕ್ಷೀಕರಿಸದೆ ಇದ್ದಾರೆ. ಚಂದ್ರಗುಪ್ತನ ಅಭ್ಯುದಯವು ಇವರಿಗೆ ಸಮ್ಮತವಿಲ್ಲದಂತೆ ತೋರುತ್ತಿದೆ. ಮತ್ತರಾದ ಈ ಜನರಿಂದ ಆಗುವ ಕಾರ್ಯಭಾಗವೇನಿದ್ದಾಗ್ಯೂ ನಾವು ನೋಡಿಕೊಳ್ಳುತ್ತಿದ್ದೇವೆ. ಈ ಸೇನಾಪತಿಗಳ ಅಧಿಕಾರಗಳನ್ನು ತೆಗೆದುಬಿಡಿರಿ ಎಂದು ಪಡೆಯ ಕರಣಿಕರಿಗೆ ಆಜ್ಞಾಪಿಸಿ, ಆಗ ದೂತರ ಮುಖಮಂ ನೋಡಿ — ಎಲೈ ಭೃತ್ಯರುಗಳಿರಾ, ನೀವು ಬಾಗುರಾಯಣಾದಿಗಳ ಬಳಿಗೆ ಹೋಗಿ. ಚಂದ್ರಗುಪ್ತನ ಅಪ್ಪಣೆಯಾಗಿದೆ. ನೀವು ಇಲ್ಲಿ ಇರಕೆಲಸವಿಲ್ಲ. ಈ ಕ್ಷಣವೇ ಈ ದೇಶಮಂ ಬಿಟ್ಟುಹೋಗತಕ್ಕದು. ಇಲ್ಲದಿದ್ದರೆ ರಾಜಕೋಪಕ್ಕೆ ಪಾತ್ರರಾದೀರೆಂದು ಹೇಳಿಬನ್ನಿರಿ ಎಂಬುದಾಗಿ ನೇಮಿಸಿ, ಚಾಣಕ್ಯನು ತನ್ನ ಮನೆಗೆ ಬಂದು ಸಿದ್ಧಾರ್ಥಕನಂ ಕರೆದು ಈ ರೀತಿಯಲ್ಲಿ ಮಾಡೆಂದು ಅವನ ಕಿವಿಯಲ್ಲಿ ಸೂಚಿಸಿ ಕಳುಹಿಸಲು, ಅದೇ ರೀತಿಗೆ ಅವನು ಹೋಗಿ ಬೊಕ್ಕಸದ ಅಧಿಕಾರಿಯಾದ

Funding: Tattva Heritage Foundation,Kolkata. Digitization: eGangotri.



ರುಕ್ಮನಂ ಕಂಡು ಚಾಣಕ್ಯರು ತನಗೆ ರಹಸ್ಯವಾಗಿ ಹೇಳಿದ ಮೇರೆಗೆ ಹನ್ನೆರಡುಲಕ್ಷ ಮೊಹರಿಗಳನ್ನು ಭದ್ರಭಟಾದಿಸೇನಾನಾಯಕರಿಗೆ ಕೊಡುವಂತೆ ದೇಶಾಂತರಸ್ಥರಾದ ವರ್ತ್ತಕರಿಗೆ ಕೋಶರಕ್ಷಕನ ಕೈಯಿಂದ ಹುಂಡಿಯ ಕಾಗದಮಂ ಬರೆಯಿಸಿ, ಅದಂ ತೆಗೆದುಕೊಂಡು ಗುಪ್ತವಾಗಿ ಭದ್ರಭಟಾದಿಗಳ ಸಮೀಪಕ್ಕೆ ಹೋಗಿ ಚಾಣಕ್ಯರು ಉಸುರಿದ ರಹಸ್ಯವಾಕ್ಯಮಂ ತಿಳಿಸಿ, ಆ ಹುಂಡಿಯ ಕಾಗದಮಂ ಅವರ ಕೈಯಲ್ಲಿ ಕೊಟ್ಟು, ಅವರು ಶಿರಸಾವಹಿಸಿ ಈ ಕೆಲಸಮಂ ನಿರ್ವಹಿಸುತ್ತಿದ್ದೇವೆ ಎಂದು ಹೇಳಿ ಸ್ವಹಸ್ತಾಕ್ಷರದಿಂದ ಚಂದ್ರ-ಗುಪ್ತನ ಸನ್ನಿಧಿಗೆ ಬರೆದುಕೊಟ್ಟ ಕಾಗದಮಂ ಗ್ರಹಿಸಿ—ಅಯ್ಯಾ ಭದ್ರ-ಭಟಾದಿಸೇನಾನಾಯಕರುಗಳಿರಾ, ನೀವು ಹೋಗಿ ಮಲಯಕೇತುವಂ ಸೇರಿ ಅಲ್ಲಿರುವ ಬಾಗುರಾಯಣಂ ಹೇಳಿದಂತೆ ಬಲಸಮೇತರಾಗಿ ಇದ್ದುಕೊಂಡು ಪ್ರಕೃತ ಬಂದಲ್ಲಿ ಚಂದ್ರಗುಪ್ತನ ಕಾರ್ಯದೊಳ್ ಅನುಕೂಲರಾಗಿರತಕ್ಕದು. ಈಗಲೇ ಪ್ರಸ್ಥಾನಮಂ ಮಾಡಿರೆಂದು ಅವರಿಗೆ ಹೇಳಿ, ರಹಸ್ಯವಾಗಿ ಚಾಣಕ್ಯರ ಬಳಿಗೆ ಬಂದು ಆ ಚಕ್ರರಕ್ಷಕರು ಚಂದ್ರಗುಪ್ತನಿಗೆ ಬರೆದುಕೊಟ್ಟ ಕೈ ಕಾಗದಮಂ ಕೊಡಲು, ಆಗ ಆಸ್ಥಾನದಲ್ಲಿ ನೇಮಿಸಿದ್ದ ದೂತರೈತಂದು ಬಾಗುರಾಯಣಾದಿಗಳ ಮನೆಯ ಬಾಗಿಲಿನಲ್ಲಿ ನಿಂತು ಚಂದ್ರಗುಪ್ತಮಹಾ-ರಾಜರ ಅಪ್ಪಣೆಯಾಗಿದೆ. ನೀವೆಲ್ಲರೂ ಈಗಲೇ ಈ ದೇಶಮಂ ಬಿಟ್ಟು ಹೋಗತಕ್ಕದು. ಅಲ್ಲದಿದ್ದರೆ ರಾಜಾಗ್ರಹಕ್ಕೆ ಪಾತ್ರರಾದೀರೆಂದು ಭದ್ರಭಟಾದಿಗಳಂ ಕುರಿತು ಹೇಳುತ್ತಿರಲು ಅವರು ರಾಜಾಪರಾಧಮಂ ಮಾಡಿದವರಂತೆ ಭೀತರಾಗುತ್ತ ತಮಗೆ ಬೇಕಾದಷ್ಟು ಸೇನೆಗಳಂ ಕರೆದುಕೊಂಡು ಪಾಟಲೀಪುರಮಂ ಬಿಟ್ಟು ಹೊರಟು ಕೆಲವು ದಿನಗಳ ಮೇಲೆ ಪರ್ವತರಾಜ್ಯಮಂ ಸೇರಿ ಮತ್ತೊಂದು ದಿವಸದಲ್ಲಿ ಬಾಗುರಾಯಣಶೇಖರರಿಗೆ ಹೇಳಿಕಳುಹಿಸಿ, ಅವರ ಸಮ್ಮತಿಯಿಂದ ಆಸ್ಥಾನದಲ್ಲಿ ಕುಳಿತಿದ್ದ ಮಲಯಕೇತುವಂ ಕಂಡು ಕೈಗಾಣಿಕೆಗಳಂ ಕೊಟ್ಟು ಮುಕುಳಿತಹಸ್ತರಾಗಿ ವಿಜ್ಞಾಪಿಸುತ್ತಿದ್ದರು.

ಮಹಾರಾಜಪುತ್ರರಾದ ಮಲಯಕೇತುಭೂಪಾಲರೇ, ನಾವು ನಂದವಾಹಿನಿಯ ನಾಯಕರು. ಭದ್ರಭಟಾದಿಗಳೆಂಬವರು. ಪಾಟಲೀಪುರವು ಚಂದ್ರಗುಪ್ತನ ಅಧೀನವಾಗಲು, ಒಂದೊಂದು ಉಪಾಧಿಯಿಂದ ನಾವು ಆ ದೊರೆಯಂ ಕಾಣಿಸಿಕೊಳ್ಳುವುದಕ್ಕೆ ಅವಕಾಶಮಿಲ್ಲದೆ ನಮ್ಮ ಕಡೆಯವರಂ

ಸಲಾಮಿಗೆ ಕಳುಹಿಸಿ ಇನ್ನೊಂದುವೇಳೆ ಕಾಣಬಹುದೆಂದು ಕಾರ್ಯಗೌರವದಿಂದ ನಾವು ಹೋಗದೇ ಇರಲು ಚಾಣಕ್ಯರು—ಕೆಲವು ದಿನಗಳ ಮೇಲೆ ಬಾಗುರಾಯಣಮುಖ್ಯರಾದ ಚಮೂಪತಿಗಳು ಇನ್ನೂ ವಂದನೆಗೆ ಬಾರದೆ ಇರುವುದಕ್ಕೆ ಕಾರಣವೇನು ? ಎಂದು ದೂತರಂ ಕೇಳಲು, ಆ ಭೃತ್ಯರು ತಿಳಿದು ಬಂದು—ಬುದ್ಧೀ, ಬಾಗುರಾಯಣನು ಪರ್ವತರಾಜ್ಯಕ್ಕೆ ಅಂದೇ ಹೋದನಂತೆ ಎಂದರು. ಹಾಗಾದರೆ ಮಲಯಕೇತುವನ್ನಾಶ್ರಯಿಸಿ ಇನ್ನೂ ಅಧಿಕನಾಗಬೇಕೆಂದು ಹೋಗಿರಬಹುದು. ಅದಂತಿರಲಿ ಭದ್ರಭಟನಂ ಕರತನ್ನಿರಿ ಎನಲು ಮೂರ್ಖನಾದ ಭಾವಮೈದುನನಿಗೆ ಕೊಟ್ಟಿದ್ದ ತಂಗಿಯ ಮುಖಮಂ ನೋಡುವುದಕ್ಕೆ ಅವಕಾಶಮಿಲ್ಲದೆ ಹನ್ನೆರಡು ವರುಷ ಕಳೆದು ಮುಖತೋರಿದು ಹೋಗುವುದಲ್ಲಾ—ಎಂಬ ವ್ಯಸನದಿಂದ ಭದ್ರಭಟನು ಹೋಗಿ ಎಂಟು ದಿವಸಗಳಾದವು. ಬರುವುದಕ್ಕೆ ಇನ್ನೂ ನಾಲ್ಕಾರು ದಿವಸಗಳಾಗಬೇಕು ಎಂದರು. ಹಾಗಾದರೆ ಡಿಂಗಿರಾತನನ್ನಾದರೂ ಕರತನ್ನಿರಿ ಎಂದು ಹೇಳಿದ ಚಾಣಕ್ಯನ ಮಾತಂ ಕೇಳಿ ಸೇವಕರು ಹೋಗಿ ತಿಳಿದು ಬಂದು—ಬುದ್ಧೀ, ರಾಜೀಕವು ಆದುದರಿಂದ ಪಂಜಿನ ಕಳ್ಳರು ಕೀಟಕದೇಶಮಂ ಹೊಕ್ಕು ರಾತ್ರಿವೇಳೆಯಲ್ಲಿ ಕೆಲವು ಹಳ್ಳಿಗಳಂ ಕೊಳ್ಳೇ ಮಾಡಿ ಡಿಂಗಿರಾತನ ಮುಖಾಶೀಗ್ರಾಮವನ್ನೂ ಸಹ ಸೂರೆಗೆಯ್ದು ಅದಕ್ಕೆ ಬೆಂಕಿ ಹೊತ್ತಿಸಿದುದರಿಂದ, ಅಲ್ಲಿನ ಪ್ರಜೆಗಳು ಓಡಿಹೋಗಲು ಆ ಚೋರರಂ ನಿಗ್ರಹಿಸಿ ರೈತರಂ ಸಮಾಧಾನಪಡಿಸುವುದಕ್ಕೆ ಆತನು ಹೋಗಿದ್ದಾನೆ ಎಂದರು. ಹಾಗಾದರೆ ಬಲಗುಪ್ತನಂ ಕರತನ್ನಿರಿ ಎಂದುದಕ್ಕೆ ಆಳುಗಳು ಹೋಗಿ ಅರಿತು ಬಂದು—ಬುದ್ಧೀ, ಪರ್ವತರಾಜನ ಸೇನೆಗೂ ನಮ್ಮ ಪಡೆಗೂ ಯುದ್ಧವಾಗುವಾಗ ದಂಡಿನಿಂದ ತಪ್ಪಿಸಿಕೊಂಡು ಹೋದ ತನ್ನ ಕುಮಾರಕನ ವಾರ್ತೆ ತಿಳಿಯದೆ, ಏಕಪುತ್ರಯುಕ್ತನಾಗಿ ಬಲಗುಪ್ತನು ತನ್ನ ಮಗನು ಅತಂತ್ರವಾದರೆ ಈ ಸಂಸಾರವು ತನಗೇಕೆನ್ನುತ್ತ ಅವನಂ ಹುಡುಕುವುದಕ್ಕೆ ಆತನೇ ಹೋಗಿದ್ದಾನಂತೆ ಎಂದರು. ಆದರೆ ವಿಜಯವರ್ಮನಂ ಕರತನ್ನಿರಿ ಎನಲು, ದಾಸರು ಹೋಗಿ ತಿಳಿದು ಬಂದು—ಬುದ್ಧೀ, ಆತನು ರೋಗೋಪದ್ರವದಿಂ ತಪ್ತನಾಗಿರುವುದರಿಂದ ಆರೋಗ್ಯ-ಸ್ನಾನವಾದ ಬಳಿಕ ಪ್ರಭುಗಳ ಸಮೀಪಕ್ಕೆ ಬರುತ್ತಲಿದ್ದೇನೆಂದು ಆತನು ಹೇಳುತ್ತಿದ್ದಾನೆ ಎಂದರು. ಪುರುಷದತ್ತನಂ ಕರತನ್ನಿರಿ ಎಂದುದಕ್ಕೆ ಅನುಚರರು ಹೋಗಿ ಕೇಳಿ ಬಂದು—ತನಗೆ ಸಂಭವಿಸಿರುವ ಕ್ಷಯಸೂತಕನಿವೃತ್ತಿ

ಯಾದ ಬಳಿಕ ಪ್ರಭುಗಳಂ ಕಾಣುವುದಕ್ಕೆ ಬರುತ್ತಲಿದ್ದೇನೆಂದು ಪುರುಷ ದತ್ತನು ವಿಜ್ಞಾಪಿಸುತ್ತಾನೆ ಎಂದರು. ಒಳ್ಳೆಯದು. ರಾಜಸೇನನಂ ಕರತನ್ನಿರಿ ಎಂದು ಹೇಳುತ್ತಲೇ ದೂತರು ಹೋಗಿ ತಿಳಿದು ಬಂದು—ಸ್ವಾಮಿ, ರಾಜಸೇನನ ಮಾತೃವಿಗೆ ಪ್ರಾಣೋತ್ಕ್ರಮಣಸಮಯವಾದುದರಿಂದ ಬ್ರಾಹ್ಮಣರ ಮುಖದಿಂ ಸರ್ವಪ್ರಾಯಶ್ಚಿತ್ತಮಂ ಮಾಡಿಸುತ್ತಿದ್ದಾನೆ. ಈಯರ್ಥಮಂ ಪ್ರಭುಗಳ ಸನ್ನಿಧಿಯಲ್ಲಿ ಅರಿಕೆ ಮಾಡಿರೆಂದು ಹೇಳಿದನು ಎಂದರು. ಲೋಹಿತಾಕ್ಷನಂ ಕರತನ್ನಿರಿ ಎನಲು ಅವರು ಆತನಂ ಕಂಡು ಬಂದು—ಬುದ್ಧೀ, ಲೋಹಿತಾಕ್ಷನು—ಉಳಿದ ದಳಪತಿಗಳೊಬ್ಬರೂ ಪ್ರಭು ಗಳ ಪ್ರಥಮದರ್ಶನಕ್ಕೆ ಬರುವುದಕ್ಕಿಲ್ಲದ ಬಳಿಕ ನಾನೊಬ್ಬನೇ ಬಂದು ಕಾಣಿಸಿಕೊಳ್ಳುವ ರೀತಿ ಎಂತಿರುವುದೋ! ನಮಗೆ ಯಜಮಾನನಾದ ಭದ್ರಭಟನು ಇಂದು ನಾಳೆ ಬರುವವನಾಗಿದ್ದಾನೆ. ಅವನ ಸಂಗಡಲೇ ನಾನೂ ಬಂದು ಪ್ರಭುಗಳಂ ಕಾಣಿಸಿಕೊಳ್ಳುತ್ತೇನೆ. ವಿಶೇಷ ಅರಿಕೆ ಮಾಡುವುದಕ್ಕೆ ಶಕ್ತನಲ್ಲ. ಹಾಗಲ್ಲವೆಂದರೆ ಸಿದ್ಧವಾಗಿದ್ದೇನೆ ಎಂದು ಸನ್ನಿ ಧಿಗೆ ವಿಜ್ಞಾಪಿಸಿಕೊಳ್ಳುತ್ತಾನೆ ಎನಲು, ಆ ದೂತರು ಹೇಳುವ ವಾಕ್ಯಮಂ ಚಾಣಕ್ಯನು ಕೇಳಿ ಈ ಭದ್ರಭಟಾದಿಗಳು ಪುರಮಂ ಬಿಟ್ಟು ಹೋಗುವ ರಾಕ್ಷಸನು ಎರಚಿದ ಮಂಕುಬೂದಿಗೆ ಮರುಳಾಗಿ ನಮ್ಮಂ ಲಕ್ಷೀಕರಿಸದೆ ಮತ್ತಾವ ದೇಶಾಧಿಪತಿಯಲ್ಲೋ ಮನಸ್ಸುಮಾಡಿ ವ್ಯಾಜಾಂತರದಿಂದ ಮುಖಮಂ ತಪ್ಪಿಸಿಕೊಂಡಿದ್ದಾರೆ. ಇವರಿಂದ ಆಗುವುದಂ ನೋಡಿಕೊಳ್ಳು ವೆನು. ಈ ಸೈನ್ಯನಾಯಕರ ಕೈಕೆಳಗಣ ಸರದಾರರಂ ಕರೆದುಕೊಂಡು ಬನ್ನಿರಿ ಎಂದು ದೂತರಿಗೆ ನೇಮಿಸಲು, ಅವರು—ನಮ್ಮ ಬಳಿಯಣ ಲಕ್ಷಲಕ್ಷಸೇನೆ ಗಳಿಗೆ ಅಧಿಪತಿಗಳಾಗಿ ನಾವು ನೇಮಿಸಿದಂತೆ ಕೇಳುತ್ತಿರುವ ಲಛ್ಮನೋಜಿ ವಿಜಯಸಿಂಗು ಯಶವಂತರಾವ್ ತುಲುಜಾಖಂಡು ಪತ್ತೇಬಹದರ್ ಮುಕುಂದಗೋಸಾವಿ ಹಿಮ್ಮತ್‌ಖಾನ್ ಪುರುಷೋತ್ತಮಲಾಲಾ ಸಿಂಧೂ ಕಾಕರ್ ಮಹತಾಪ್‌ಜಂಗ್ ಕಿಶೋರ್ ಘೋರಪಡೆ ರಾಮಾಜಿ ವಾಘ್ಯಾರ್ ಎಂಬ ಸರದಾರರನ್ನೂ ಷಂಷೇರ್ನಬಾಬು ಅಲ್ಲೀನಬಾಬರೆಂಬ ಅಕ್ಷೌಹಿಣೀಪತಿ ಗಳನ್ನೂ ಕರೆತಂದು ನಿಲ್ಲಿಸಿದರು. ಅವರಂ ನೋಡಿ ಚಾಣಕ್ಯನು—ಎಲೈ ಸರದಾರರುಗಳಿರಾ, ಭದ್ರಭಟಾದಿಗಳ ಕಡೆಯಿಂದ ತೆಗೆದು ಮತ್ತೊಂದು ಕಡೆಯಲ್ಲಿ ನಿಮ್ಮೆಲ್ಲರಿಗೂ ಉದ್ಯೋಗಮಂ ನೇಮಿಸಿ ಅಧಿಕ ಸನ್ಮಾನಗಳಂ

ಮಾಡುತ್ತಿದ್ದೇವೆ. ನೀವು ಭದ್ರಭಟಾದಿಗಳಂ ಬಿಟ್ಟು ನಮ್ಮ ನಿಮ್ಮ ಬಳಿಯಣ ಫೌಜುಗಳಂ ಕರೆದುಕೊಂಡು ಬನ್ನಿರಿ ಎನಲು, ಆ ಮಾತಿಗೆ ಆ ಸರದಾರರು— ಸ್ವಾಮಿಾ, ಬಹುಕಾಲದಿಂದ ನಮ್ಮಂ ರಕ್ಷಿಸಿ ವ್ಯಸನಾಭ್ಯುದಯಗಳಲ್ಲಿ ನಮಗೆ ಅಭಯಮಂ ಕೊಟ್ಟು ತಮ್ಮ ವಾಕ್ಯಗಳಂ ಮಿಾರದಂತೆ ನಮ್ಮ ಆಯುಧಗಳಂ ಮುಟ್ಟಿಸಿಕೊಂಡಿರುವ ಭದ್ರಭಟಾದಿಗಳನ್ನಗಲಿ ನಾವು ಬರುವುದಿಲ್ಲ. ಅವರಿಗೆ ಮಾಡಿದ ಸನ್ಮಾನವೇ ನಮ್ಮೆಲ್ಲರದು ಎಂದು ಹೇಳಿಕೊಂಡುದಕ್ಕೆ ಚಾಣಕ್ಯನು—ಇವರೆಲ್ಲರೂ ಕೃತಸಂಕೇತರಾಗಿ ತಮ್ಮಿಂದಲ್ಲದೆ ರಾಜಕಾರ್ಯ ನಿರ್ವಾಹಮಾಗದೆಂಬ ಗರ್ವದಿಂದ ಯಾವ ತೆರದಲ್ಲಿಯೂ ನಮ್ಮನ್ನೇ ಒಡಂಬಡಿಸುವರು. ಮದಹಂಕಾರಿಗಳಾಗಿ ಮತ್ತರಾದ ಈ ಭದ್ರಭಟಾದಿಗಳ ಉದ್ಯೋಗಂಗಳಂ ತೆಗೆಯಿರಿ ಎಂದು ಕರಣಿಕರಿಗೆ ನೇಮಿಸಿ, ತನ್ನ ಬಳಿಯಣ ಭೃತ್ಯರಂ ಕರೆದು—ಎಲೈ ದೂತರುಗಳಿರಾ, ಈ ಭದ್ರಭಟಾದಿಗಳನ್ನು ಈ ದೇಶಪುರಗಳಲ್ಲಿ ಇರಲೀಸದೆ ಹೊರಡಿಸಿ ಬಂದು ಆ ಬಳಿಕ ಭದ್ರಭಟಾದಿಗಳು ಪ್ರಭುವಂ ಲಕ್ಷೀಕರಿಸದೆ ಪುಂಡುಪಾಳ್ಯಗಾರರಾಗಿ ಇದ್ದುದರಿಂದ ಅವರಂ ಈ ರಾಷ್ಟ್ರದಿಂ ಹೊರಡಿಸಿದ್ದೇವೆ ಎಂದು ಡಂಗುರಮಂ ಹಾಕಿ ಸಾರಿಸಿಬಿಡಿರಿ ಎನಲು, ಆ ಚಾಣಕ್ಯಂ ಹೇಳಿದ ರೀತಿಗೆ ಭಟರು ನಾವಿದ್ದ ಬಳಿಗೆ ಬಂದು ಈ ಕ್ಷಣವೇ ನೀವು ಈ ಸೀಮೆಯಂ ಬಿಟ್ಟುಹೋಗಿರಿ ಎಂದು ನಿರ್ಬಂಧಪಡಿಸಿ ಹೊರಡಿಸಿಬಿಟ್ಟರು. ಹೀಗೆ ನಮ್ಮ ಕಾರ್ಯಗೌರವವು ಸತ್ಯವೋ ಅಲ್ಲವೋ ಎಂದು ವಿಚಾರಿಸದೆ ಅಪಮಾನವಾಕ್ಯಪೂರ್ವಕಮಾಗಿ ಚಾಣಕ್ಯನು ನಮ್ಮಂ ಹೊರಡಿಸುವವನಾದರೂ ಪುನಃ ಆತನ ಮೇಲೆ ಪ್ರತಿಭಟಿಸಿದರೆ ಭದ್ರಭಟಾದಿಗಳು ತಾವೇ ಪ್ರಭುತ್ವವನ್ನಪೇಕ್ಷಿಸಿ ದುಡುಕಿದರು ಎಂಬ ಲೋಕಾಪವಾದಕ್ಕೆ ಭೀತರಾಗಿ ಅನ್ಯದೇಶಾಧಿಪತಿಗಳಿಗೆ ನಾವು ಯಾರೋ ಗೃಹಸ್ಥರೆಂದು ಹೇಳಿಕೊಂಡು ನೀವು ಆದೇಶಮಂ ಬಿಟ್ಟು ಬಂದು ಯಶೋವಂತರಾಗಿರುವುದಂ ಕೇಳಿ ನಿಮ್ಮ ಕಂಡರೆ ನೀವು ಸಂರಕ್ಷಿಸುವಿರೆಂದು ತಿಳಿದು ಬಹುಕಾಲದಿಂದ ನಮ್ಮಂ ನಂಬಿರುವ ಸೈನ್ಯಗಳಂ ಜೊತೆಯಲ್ಲಿ ಕರೆದುಕೊಂಡು ಸೇವಿಸುವುದಕ್ಕೆ ಬಂದು ಇದ್ದೇವೆ. ಪ್ರಭುಗಳ ಅವಲಂಬನವಿಲ್ಲದೆ ಈ ಪರಿವಾರಮಂ ಇಟ್ಟುಕೊಂಡು ಸಂರಕ್ಷಿಸುವುದಕ್ಕೆ ನಮಗೆ ಶಕ್ಯವಲ್ಲ. ನಿಮ್ಮಲ್ಲಿ ಉದ್ಯೋಗವಿದ್ದರೆ ಇರುತ್ತೇವೆ. ಇಲ್ಲದಿದ್ದರೆ ಮುಂದಕ್ಕೆ ಅಪ್ಪಣೆಯಂ ಕೊಡಿಸತಕ್ಕದು ಎಂದು ಭದ್ರಭಟಾದಿಗಳು ಮಲಯಕೇತುವಿಗೆ ಹೇಳಿಕೊಳ್ಳುತ್ತಿರಲು, ಆ ವಾಕ್ಯಮಂ

ಕೇಳಿ ಅರಸುಮಗನು ಬಾಗುರಾಯಣನ ವದನಮಂ ನಿರೀಕ್ಷಿಸಲು ಆತನು ಮಲಯಕೇತುವಂ ಕುರಿತು—

ಅಯ್ಯಾ ರಾಜಕುಮಾರಕನೇ, ಇವರು ಹೇಳಿಕೊಂಡುದು ನಿನ್ನ ಚಿತ್ತಕ್ಕೆ ವೇದ್ಯವಾಯಿತಷ್ಟೆ? ಈ ಭದ್ರಭಟಾದಿಗಳಿಗೆ ಚಂದ್ರಗುಪ್ತನು ಅಪಮಾನಪಡಿಸಿ ಅಧಿಕಾರಮಂ ತೆಗೆದು ಹೊರಡಿಸಿದುದೇ ನಿಶ್ಚಯಮಾದರೆ ಎಂದು ಮಲಯಕೇತುವಿನ ಬಳಿಯಲ್ಲಿದ್ದ ಜನಗಳ ಮುಖಮಂ ನೋಡಲು ಆ ಒಡನೆ ಅವರೆಲ್ಲರೂ ದೂರದಲ್ಲಿ ನಿಂತ ಮೇಲೆ—ಚಂದ್ರಗುಪ್ತನು ನಿನ್ನ ಕೈವಶನಾದನೆಂದು ತಿಳಿಯಬೇಕು. ನಾವಾಗಿ ಚಂದ್ರಗುಪ್ತನಿಗೂ ಈ ಸೇನಾಪತಿಗಳಿಗೂ ಭೇದೋಪಾಯಮಂ ಉಂಟುಮಾಡಿ ಒಡಂಬಡಿಸಿ ಕರೆಯ ಕಳುಹಿಸುವುದಕ್ಕಿಂತ ಮೊದಲೇ ಇವರು ತಾವಾಗಿ ಚಂದ್ರಗುಪ್ತನಲ್ಲಿ ವಿರೋಧಮಂ ಸಂಪಾದಿಸಿ ನಿನ್ನನ್ನಾಶ್ರಯಿಸುವುದಕ್ಕೆ ಬಂದುದು ನಿನ್ನ ಕಾರ್ಯಕ್ಕೆ ಅನುಕೂಲಮಾದಂತಾಯಿತು. ಈ ಪ್ರಮುಖನಾದ ಭದ್ರಭಟನೂ ಶೂರನಾದ ಪುರುಷದತ್ತನೂ ಕಾರ್ಯದಕ್ಷನಾದ ಡಿಂಗಿರಾತನೂ ಸಾಹಸಿಯಾದ ಬಲಗುಪ್ತನೂ ಸೇನಾರಂಜಕನಾದ ರಾಜಸೇನನೂ ಸಮರದಲ್ಲಿ ಹಿಮ್ಮೆಟ್ಟದ ಲೋಹಿತಾಕ್ಷನೂ ಶತ್ರುಗಳಂ ತೃಣದಂತೆ ಕಾಣುವ ವಿಜಯವರ್ಮನೂ ಎಂಬ ಈ ಬಲನಾಯಕರು ಪಾಟಲೀಪುರಮಂ ಬಿಟ್ಟು ಬಂದ ಬಳಿಕ ಚಂದ್ರಗುಪ್ತನಲ್ಲಿ ಕಾರ್ಯನಿರ್ವಾಹಿಗಳು ಬೇರೆ ಯಾರು ಇದ್ದಾರು? ಆದುದರಿಂದ ಮುಂದಣ ರಾಜತಂತ್ರವು ಸುಲಭವಾಗಿ ಅನುಕೂಲಮಾದೀತು ಎಂದು ಹೇಳಲು ಅದಂ ಕೇಳಿ ಮಲಯಕೇತುವು ತನ್ನ ಮನಸ್ಸಿನಲ್ಲಿ ಪೂರ್ವದೊಳ್ ನಡೆದ ವೃತ್ತಾಂತಮಂ ಸ್ಮರಿಸಿಕೊಂಡು ಆದಿಯಲ್ಲಿ ಚಾಣಕ್ಯನು ಕೊಟ್ಟಿದ್ದ ಕಾಗದಮಂ ತೆಗೆದುಕೊಟ್ಟರೆ ಈತನು ಅದಕ್ಕೆ ಏನು ಉತ್ತರಮಂ ಹೇಳುವನೋ ತಿಳಿಯಬೇಕೆಂದು ನಿಶ್ಚಯಿಸಿ ಆ ಪತ್ರಿಕೆಯಂ ಬಾಗುರಾಯಣನ ಕೈಯಲ್ಲಿ ಕೊಟ್ಟು—

ಅಯ್ಯಾ ಮಿತ್ರನೇ, ಈ ಕಾಗದಮಂ ನೋಡಿಕೊಳ್ಳುವವನಾಗು. ಇದರಲ್ಲಿ ಚಂದ್ರಗುಪ್ತನ ಅಭಿಮತವು ನಮಗೆ ಸಮ್ಮತವೆಂದು ನಿಮ್ಮೆಲ್ಲರ ಅಕ್ಷರಗಳಿಂ ಬರೆದು ಇದೆ. ಇದಂ ಮೊದಲು ಚಂದ್ರಗುಪ್ತನು ನಮ್ಮ ತಂದೆಯ ವಶಕ್ಕೆ ಕೊಟ್ಟು ಇದರ ಭರವಸಮಂ ತೋರಿಸಿ ನಮ್ಮೆಲ್ಲರಂ ಕರೆದುಕೊಂಡು

ನಂದರ ಮೇಲೆ ಕಾರ್ಯಭಾಗಕ್ಕೆ ನಡೆದನು. ಈ ಸೇನಾಪತಿಗಳೇ ಹಿಂದೆ ಚಂದ್ರಗುಪ್ತನ ಕಾರ್ಯಕ್ಕನುಕೂಲರಾಗಿ ಸ್ವಹಸ್ತಾಕ್ಷರ ಸಮ್ಮತಿಗಳಂ ಬರೆದು ಕೊಟ್ಟು ಈ ಸಮಯದಲ್ಲಿ ಆತನ ಸಂಗಡ ವಿರೋಧಮಂ ಉಂಟುಮಾಡಿ ಕೊಂಡು ನಮ್ಮಲ್ಲಿ ಉದ್ಯೋಗವನ್ನಪೇಕ್ಷಿಸಿ ಬಂದಿರುವುದಂ ನೋಡಿದರೆ ಬಹಳ ಆಶ್ಚರ್ಯಮಾಗಿ ತೋರುತ್ತಿದೆ. ನೀನಾದರೋ ನಮಗೆ ಬಂದು ಒದಗಿದ ಆಪತ್ಕಾಲದಲ್ಲಿ ಪ್ರಾಣಮಂ ರಕ್ಷಿಸಿ ಇಲ್ಲಿಗೆ ಕರತಂದವನಾದುದರಿಂದ ನಿನ್ನಂ ಪರಮಾಪ್ತನೆಂದು ತಿಳಿದಿರುವೆನೆಂಬುದಾಗಿ ಹೇಳುತ್ತಿರಲು ಬಾಗುರಾಯಣನು ಕಾಗದಮಂ ನೋಡಿಕೊಂಡು ತಮ್ಮ ಅಕ್ಷರ ಹೌದು ಎಂದು ನಿಶ್ಚಯಿಸಿ ಅದರ ಸಂಗತಿಯಂ ತಿಳಿದು ಉಂಟಾದುದಂ ಹೇಳಿ ಈತನ ಮನಸ್ಸಿನ ಸಂಶಯಮಂ ಬಿಡಿಸುವೆನೆಂದು ಬಗೆದು—

ಅಯ್ಯಾ ರಾಜಕುಮಾರನೇ, ಈ ಪತ್ರದಲ್ಲಿರುವ ಸಮ್ಮತಿಗಳು ನಮ್ಮೆಲ್ಲರ ಅಕ್ಷರಗಳಲ್ಲಿರುವುದು ನಿಜ. ಈ ವಿಷಯವಾಗಿ ನೀನು ಕೇಳು ವುದು ವಿಹಿತವೇ ಸರಿ. ಇದರ ವಿವರಮಂ ತಿಳುಹಿಸುವೆನು. ಚಿತ್ತದಲ್ಲಿ ತರುವವನಾಗು. ಮೊದಲು ಚಂದ್ರಗುಪ್ತನು ಅನ್ನಸತ್ರಮಂ ಬಿಟ್ಟುಹೋಗ ಬೇಕೆಂಬ ಸಮಯದಲ್ಲಿ ನಮ್ಮ ಬಳಿಗೆ ಬಂದು ತಮ್ಮ ತಂದೆಯು ಕಾಶೀ ಪಟ್ಟಣದಲ್ಲಿ ಮಾಡಿಸಿರುವ ಶಿವಾಲಯದ ಗೋಪುರಪ್ರಾಕಾರಂಗಳಂ ರಚಿಸುವು ದಕ್ಕಾಗಿ ಕೇಶವದಾಸನೆಂಬ ವರ್ತಕನಲ್ಲಿ ಕೆಲವು ದ್ರವ್ಯಗಳನಿಟ್ಟು ಕಾಲವಾದ ಬಳಿಕ ಆ ಕಟ್ಟಡಮಂ ಪೂರಯಿಸುವುದಕ್ಕೆ ನಾನು ಬಾಲಕನಾಗಿರುವುದರಿಂ ತನ್ನ ಮೇಲೆ ಮಾತು ಬಂದೀತೆಂಬುವುದರಲ್ಲಿ ಭೀತನಾಗಿ ನಿಮ್ಮೆಲ್ಲರ ಸಮ್ಮತಿ ಯಾದರೆ ಆತನು ದೇವಾಲಯದ ಕಾರ್ಯಮಂ ಪೂರಯಿಸುತ್ತಿದ್ದಾನೆ ಎಂದು ನಮ್ಮೆಲ್ಲರಂ ಒಡಂಬಡಿಸಿ ಆ ಕೆಲಸಮಂ ಮಾಡುವಂತೆ ಕೇಶವದಾಸನಿಗೆ ಅಖಂಡಮಾದ ಕಾಗದಮಂ ಬರೆದು ಮೊದಲು ತನ್ನ ಸಮ್ಮತಿಯಂ ಹಾಕಿ ಅದರಲ್ಲಿ ನಮ್ಮ ಸಮ್ಮತಿಗಳಂ ಬರೆಸಿಕೊಂಡು ಹೋದ ಬಳಿಕ ಪಾರ್ವತೇಯ ಸೇನಾಸಮೇತನಾಗಿ ಬಂದಾಗಲೇ ಆತನಂ ಕಂಡೆವಲ್ಲದೆ ಈ ಮಧ್ಯದಲ್ಲಿ ಅವನ ಹೆಸರನ್ನಾದರೂ ಕೇಳಿದವರಲ್ಲ. ಅಖಂಡಮಾಗಿ ಆಗ ಬರೆದಿದ್ದ ಪತ್ರಿಕೆಯಲ್ಲಿ ಉಪಯುಕ್ತಮಾದ ಮಟ್ಟಿಗೆ ನಿಲ್ಲಿಸಿಕೊಂಡು ಶೇಷವು ಛೇದಿತ ಮಾಗಿರುವುದರಿಂದ ಇದೆಲ್ಲವೂ ಚಾಣಕ್ಯನ ಕಪಟೋಪಾಯವು. ಇದು

ಹೌದೋ ಅಲ್ಲವೋ ? ನೀನೇ ನೋಡಿ ತಿಳಿಯುವವನಾಗು ಎಂದು ಬಾಗು-ರಾಯಣನು ಹೇಳಲು ಚಾಣಕ್ಯನು ಮಹಾಕಪಟಿಯಾದುದರಿಂದ ಹೀಗೆ ಛದ್ಮನೆಯಂ ಮಾಡಿದ್ದಾನೆಂದು ಮಲಯಕೇತುವು ನಿರ್ಣಯಿಸಿ—

ಅಯ್ಯಾ, ನೀನು ಹೇಳಿದ ಬಳಿಕ ಭದ್ರಭಟಾದಿಗಳು ಇಲ್ಲೇ ಇರಲಿ. ಇವರ ಸೇನೆಗಳಿಗೆ ಸಂಬಳಗಳನ್ನೂ ಸೇವೆಗಳನ್ನೂ ನೇಮಿಸುವೆವು ಎಂದು ಬಾಗುರಾಯಣನಿಗೆ ಉಸುರುತ್ತಿರಲು ಆಗ ರಾಕ್ಷಸಸೈತಂದು ಈ ಭದ್ರಭಟಾದಿಗಳು ಬಂದು ಮಲಯ ಕೇತುವಂ ಕಂಡು ವಿನೀತರಾಗಿ ನಿಂತಿರುವುದಂ ನೋಡಿ ತನ್ನ ಮನಸ್ಸಿನಲ್ಲಿ — ನಾವು ಪಾಟಲೀಪುರದಲ್ಲಿ ಈ ಭದ್ರಭಟಾದಿಗಳಿಗೆ ನಿಯಾಮಕರಾಗಿದ್ದು ಈಗ ಮಲಯಕೇತುವಿನ ಬಳಿಯಲ್ಲಿ ಸರ್ವಾಧಿಕಾರಮಂ ಮಾಡುತ್ತಿರುವುದಂ ತಿಳಿದು ನನ್ನಂ ಕಂಡು ಮಾತನಾಡದೆ ಬಾಗುರಾಯಣ ಶೇಖರರ ಮುಖದಿಂದಲೇ ಅರಸನಂ ಕಂಡು ಇಲ್ಲಿಯೂ ಸೇನಾಪತಿತ್ವಕ್ಕೆ ಯತ್ನಮಂ ಮಾಡುವುದರಿಂದ ಚಂದ್ರಗುಪ್ತನಲ್ಲಿ ಉಪೇಕ್ಷೆಯಿಂದ ಬಂದು ಇದ್ದಾರೋ ? ಚಾಣಕ್ಯನಿಂ ಪ್ರೇರಿತರಾಗಿ ಕಪಟಮಂ ಎಣಿಸಿ ಬಂದು ಇದ್ದಾರೋ ? ತಿಳಿಯಕೂಡದು. ಇವರಿಗೆ ಇಲ್ಲಿ ಆಶ್ರಯವಾಗದಂತೆ ಮಲಯಕೇತುವಿಗೆ ಹೇಳಿ ಹಿಂದಕ್ಕೆ ಕಳುಹಿಸೋಣವೆಂದರೆ ಇವರ ಬಹುವಾಹಿನಿಯು ಪಾಟಲೀಪುರಮಂ ಬಿಟ್ಟು ಬಂದುದು ನಾವು ಮಾಡುವ ರಾಜಕಾರ್ಯಕ್ಕೆ ಅನುಕೂಲವಾಯಿತು. ಇವರಂ ಇಲ್ಲಿಯೂ ಇರದಂತೆ ಕಳುಹಿಸಿದರ ಮತ್ತಾವ ದೇಶಾಧಿಪತಿಯನ್ನಾಗಲಿ ಆಶ್ರಯಿಸಿ ಮುಂದೆ ನಮಗೆ ಶತ್ರುಗಳಾದರೂ ಆಗಬಹುದು. ಹಾಗಲ್ಲದೆ ಪುನಃ ಲಜ್ಜಾರಹಿತರಾಗಿ ಸ್ಥಳದಲ್ಲಿರುವ ಸ್ತ್ರೀಪುತ್ರರ ಮೇಲಣ ಆಶೆಯಿಂದ ಚಂದ್ರಗುಪ್ತನಿಗೆ ಶರಣಾಗತರಾದರೆ ಹನಿಗೂಡಿ ಹಳ್ಳವಾಗಿ ಆಮೇಲೆ ನದಿಯಾಗಿ ಹರಿಯುವ ರೀತಿಗೆ ಕಳೆದು ಹೋದ ಪಡೆಯು ಪುನಃ ಒಟ್ಟುಗೂಡಲು ನಾವು ಮಹಾಪ್ರಯತ್ನಮಂ ಮಾಡಬೇಕಾದೀತು. ಸುಲಭದಲ್ಲಿ ತೀರದು. ಆದುದರಿಂದ ಈ ಭದ್ರಭಟಾದಿಗಳಂ ಅನ್ಯತ್ರ ಕಳುಹಿಸದೆ ಪಾಟಲೀಪುರಕ್ಕೂ ಹೋಗಲೀಸದೆ ಇಲ್ಲಿಯೂ ವಿಶೇಷ ಸ್ವಾತಂತ್ರ್ಯವು ಇಲ್ಲದಂತೆ ಕಾರ್ಯಮಂ ನೇಮಿಸಿ ಇರಿಸಿಕೊಳ್ಳುವೆನೆಂದು ಯೋಚಿಸುತ್ತಿರಲು ಆಗ ಮಲಯಕೇತು ಆತನಂ ಕುರಿತು—

ಅಮಾತ್ಯರೇ, ನಂದ ಸೇನಾನಾಯಕರಾದ ಭದ್ರಭಟಾದಿಗಳು ಚಂದ್ರಗುಪ್ತನನ್ನುಪೇಕ್ಷಿಸಿ ನಮ್ಮನ್ನಾಶ್ರಯಿಸಲೋಸುಗ ಬಂದು ಇದ್ದಾರೆ. ಇವರು ದೊಡ್ಡ ಮನುಷ್ಯರಂತೆ. ಮೌರ್ಯಪುತ್ರನು ಇವರಿಗೆ ಅಪಮಾನಮಂ ಮಾಡಿದನಂತೆ. ನೀವು ವಿಚಾರಿಸಿ ಇವರ ನಿರ್ವಾಹಾನುಗುಣ್ಯಮಾಗಿ ಕಾರ್ಯಗಳನ್ನೂ ಸಂಬಳಗಳನ್ನೂ ಸನ್ಮಾನಗಳನ್ನೂ ನೇಮಿಸುವವರಾಗಿರಿ ಎಂದು ಹೇಳಲು—

ಅಯ್ಯಾ ಕುಮಾರಕನೇ, ಭದ್ರಭಟಾದಿಗಳು ದೊಡ್ಡ ಮನುಷ್ಯರಹುದು. ಇವರು ಪಾಟಲೀಪುರಮಂ ಬಿಟ್ಟು ಬಂದುದು ನಮ್ಮ ಕಾರ್ಯಗಳಿಗನುಕೂಲಮಾಯಿತು. ಇವರಿಗೆ ತಕ್ಕ ಉದ್ಯೋಗಗಳಂ ನೇಮಿಸುವೆನೆಂದು ಹೇಳುತ್ತಿರುವಷ್ಟರಲ್ಲಿಯೇ ಮಧ್ಯಾಹ್ನ ಸೂಚಕಮಾದ ವಾದ್ಯಧ್ವನಿಗಳಾಗಲು ಎಂದಿನಂತೆ ಎಲ್ಲರೂ ಎದ್ದು ತಮ್ಮ ತಮ್ಮ ವಾಸಗೃಹವನ್ನೈಯ್ದಿದರು. ಆ ಮಾರನೆಯ ದಿವಸ ರಾಕ್ಷಸನು ಮಲಯಕೇತುವಿನ ಓಲಗದ ಹಜಾರಕ್ಕೆ ಬರುವುದಂ ತಿಳಿದು ಭದ್ರಭಟಾದಿಗಳು ಬಂದು ರಾಕ್ಷಸನಂ ಕಾಣಿಸಿಕೊಳ್ಳುತ್ತಿರಲು, ಅವರಂ ಉಚಿತಪ್ರಕಾರಮಾಗಿ ಕುಳ್ಳಿರಿಸಿಕೊಂಡು ರಾಕ್ಷಸನು ಆ ಚಮೂಪತಿಗಳಿಗೆ ಅಧಿಕಾರಮಂ ನೇಮಿಸುತ್ತಿದ್ದನು. ಎಂತೆಂದರೆ—

ಅಯ್ಯಾ ಭದ್ರಭಟಡಿಂಗಿರಾತರುಗಳಿರಾ, ರಾಜಕಾರ್ಯಾರ್ಥಮಾಗಿ ಮಲಯಕೇತುವಿನ ಧ್ವಜಿನಿಯು ಪಾಟಲೀಪುರಕ್ಕೆ ಪುನಃ ಹೋಗುವುದರಿಂದ ಸೇನೆಗಳಿಗೆ ಆಧಾರಮಾಗಿ ಧನಧಾನ್ಯಗಳು ಬರುವಲ್ಲಿ ಅದಕ್ಕೆ ಶತ್ರುಬಾಧೆ ತಗುಲದಂತೆ ನೀವು ಚತುರಂಗಬಲಸಮೇತರಾಗಿ ಎಚ್ಚರಿಕೆಯಿಂದ ಕಾದುಕೊಂಡು ಇರುವವರಾಗಿರಿ ಎಂದು ಅವರಿಗೆ ನೇಮಿಸಿ—

ಅಯ್ಯಾ ಬಲಗುಪ್ತನೇ, ಮಹಾ ನದಿಗಳಂ ದಾಟಿ ಪಡೆಗಳು ಹೋಗುವಲ್ಲಿ ಮೊದಲೇ ಸಿದ್ಧವಾಗಿರುವ ನಾವೆಗಳನ್ನು ಅರಿಗಳು ಬಂದು ಆಕ್ರಮಿಸದಂತೆ ನದೀತೀರಗಳಲ್ಲಿ ಕಾದಿರುವವನಾಗು ಎಂದು ಕಟ್ಟುಮಾಡಿ—

ಅಯ್ಯಾ ಪುರುಷದತ್ತನೇ, ಮಲಯಕೇತು ಮಹಾರಾಯನು ವಿತರಣಶಾಲಿಯಲ್ಲವೆಂದು ಜನರು ಹೇಳಿಕೊಳ್ಳದಂತೆ ವಾಹಿನಿಯ ಸಂಗಡ ಬರುವ ದೀನಾನಾಥವಿಪನ್ನರಿಗೆ ಅನ್ನೋದಕಗಳಂ ಕೊಡುತ್ತ ಹಾಹಾಕಾರಮಿಲ್ಲದಂತೆ ಮಾಡುತ್ತಿರುವವನಾಗು ಎಂದು ಆಜ್ಞಾಪಿಸಿ—

Funding: Tattva Heritage Foundation,Kolkata. Digitization: eGangotri.



ಅಯ್ಯಾ ವಿಜಯವರ್ಮನೇ, ಸೈನ್ಯವು ಪ್ರಯಾಣದಲ್ಲಿ ಆಯಾಸವಿಲ್ಲದೆ ಸುಲಭವಾಗಿ ತೆರಳುವಂತೆ ಮಾರ್ಗದ ಹಳ್ಳತಿಟ್ಟುಗಳಂ ಸಮಗೆಯ್ಯುತ್ತ ಪೃತನಾನಿವೇಶದ ಭೂಮಿಯಂ ಪರಿಶೋಧಿಸುತ್ತ ಬರುವವನಾಗು ಎಂದು ನಿರೂಪಿಸಿ—

ಅಯ್ಯಾ ರಾಜಸೇನನೇ, ದಂಡು ತೆರಳುವಲ್ಲಿ ವೈರಿಗಳ ಆಗಮನಮಂ ತಿಳಿಯುತ್ತ ಅವರಂ ಮುಂದೆ ಬರಲೀಸದೆ ತಡೆದು ನಿಲ್ಲಿಸುತ್ತ ಗೂಢಚಾರರಂ ಶೋಧಿಸುತ್ತ ಜಾಗ್ರತೆಯಿಂದ ಇರುವವನಾಗು ಎಂದು ವಿಧಿಸಿ—

ಅಯ್ಯಾ ರಾಜಸೇನನೇ, ಮಲಯಕೇತುವಿನ ಫೌಜುಗಳು ರಿಪುಗಳ ದುರ್ಗಗಳನ್ನಾಕ್ರಮಿಸುವಲ್ಲಿ ಬಲಸಮೇತನಾಗಿ ಸಹಾಯಮಂ ಮಾಡುತ್ತಿರುವವನಾಗು ಎಂದು ಅಪ್ಪಣೆ ಮಾಡಿದನು. ಈ ಪ್ರಕಾರವಾಗಿ ರಾಕ್ಷಸನು ತಮಗೆ ಅನುಕೂಲವಲ್ಲದ ಉದ್ಯೋಗಗಳಂ ನೇಮಿಸುತ್ತಿರುವುದಂ ಕೇಳಿ ಆ ಭದ್ರಭಟಾದಿಗಳು ತಮ್ಮ ಮನಸ್ಸಿಗೆ ಸಮ್ಮತವಿಲ್ಲದಿದ್ದರೂ ತಾವು ಯೋಚಿಸಿ ಬಂದ ಕಾರ್ಯಮಂ ಸಾಧಿಸಲೋಸುಗ ಕಾಲಹರಣ ನಿಮಿತ್ತವಾಗಿ ಆ ಸರ್ವಾಧಿಕಾರಿಯು ಅಪ್ಪಣೇ ಕೊಟ್ಟ ಮೇರೆಗೆ ಒಪ್ಪಿಕೊಳ್ಳುತ್ತಿರಲು, ರಾಕ್ಷಸನು ಅವರೆಲ್ಲರಿಗೂ ಕರ್ಪೂರವೀಳೆಯಂಗಳಂ ತರಿಸಿಕೊಟ್ಟು ಸ್ವಸ್ಥಾನಕ್ಕೆ ಕಳುಹಿಸಿ ತಾನಿದ್ದೆಡೆಗೆ ಬರುತ್ತಿದ್ದನು.

ಹೀಗಿರಲು ಇತ್ತ ಭದ್ರಭಟಾದಿ ಸೇನಾನಾಯಕರು ಚಾಣಕ್ಯರ ಮನೋನುಸಾರವಾಗಿ ಮಲಯಕೇತುವಿನ ಬಳಿಗೆಯ್ದಿ ಆತನಂ ಕಂಡು ಬಾಗುರಾಯಣನ ವಾಕ್ಯದಿಂದ ತಮಗೆ ಅಧಿಕಾರಂಗಳಂ ನೇಮಿಸುವಂತೆ ಆ ರಾಜಪುತ್ರನ ಅಪ್ಪಣೆಯಂ ರಾಕ್ಷಸನಿಗೆ ಮಾಡಿಸಲು ಆ ಅಮಾತ್ಯನು ಈ ಸೇನಾಪತಿಗಳಲ್ಲಿ ಸಂಶಯಬುದ್ಧಿಯಿಂ ಅವರ ಗೌರವಕ್ಕೆ ಯೋಗ್ಯವಲ್ಲದ ಕಾರ್ಯಗಳಂ ನೇಮಿಸಿ ಮಲಯಕೇತುವಿನ ಸಮೀಪದಲ್ಲಿ ವಿಶೇಷಸ್ವಾತಂತ್ರ್ಯಮಿಲ್ಲದಂತೆ ಮಾಡಿ ಸಂಬಳಗಳಂ ನಿಗದಿಗೈಯ್ಯದೆ ಅಲ್ಲಿಂದ ಮತ್ತೊಂದು ಕಡೆಗೂ ಹೋಗಲೀಸದೆ ಪ್ರತ್ಯಾಶೆಯಂ ತೋರಿಸುತ್ತ ಅವರ ಕೈಯ ದ್ರವ್ಯಗಳಂ ವ್ಯಯಮಾಡಿಸುತ್ತ ಅವರ ಮನೋಭಾವಮಂ ತಿಳಿಯಬೇಕೆಂದು ನಿರೀಕ್ಷಿಸುತ್ತಿರುವ ಅಭಿಪ್ರಾಯಮಂ ಸಮಿದ್ಧಕನೆಂಬ ಗೂಢಚಾರನ ಮುಖದಿಂ ತಿಳಿದು ಚಾಣಕ್ಯನು ಅಮಾತ್ಯನ ಬುದ್ಧಿಗೆ ಸಂತೋಷಪಟ್ಟು ತನ್ನ ಪ್ರಿಯ ಶಿಷ್ಯನಂ ಕುರಿತು—

Funding: Tattva Heritage Foundation,Kolkata. Digitization: eGangotri.



ಎಲೈ ಶಾರ್ಙ್ಗರವನೇ, ನಾನು ಮಾಡಿದ ಪ್ರತಿಜ್ಞೆಗನುಸಾರವಾಗಿ ನಂದರ್ಕಿಲ್ಲರಂ ಮೂಲೋತ್ಪಾಟನಂಗೆಯ್ದು ಧ್ರುವಜಲದಲ್ಲಿ ತಾವರೆಯಂ ನೆಟ್ಟಂತೆ ಚಂದ್ರುಗುಪ್ತನಲ್ಲಿ ರಾಜ್ಯಲಕ್ಷ್ಮಿಯಂ ನಿಲ್ಲಿಸಿದೆನು. ಈ ರಾಜ್ಯರಮೆಯು ಸ್ಥಿರ ಮಾಗಿರುವುದಕ್ಕೆ ನಾನು ಪ್ರಾಧಾನ್ಯಶಸ್ತ್ರಮಂ ಸ್ವೀಕರಿಸಿದವನಾದರೂ ತಪೋವನವನೆಯ್ದುವಲ್ಲಿ ಈ ಪ್ರಾಧಾನ್ಯಶಸ್ತ್ರಗ್ರಹಣಕ್ಕೆ ರಾಕ್ಷಸನೊಬ್ಬ ಹೊರತು ಇತರರು ಯಾರೂ ಯೋಗ್ಯರಾಗಿ ಕಾಣಿಸುವುದಿಲ್ಲ. ಅವನ ಗುಣಗಳೂ ಸ್ವಾಮಿಭಕ್ತಿಯೂ ಬುದ್ಧಿಕೌಶಲ್ಯವೂ ಕಾರ್ಯದಕ್ಷತೆಯೂ ಸತ್ಯಸಂಧತೆಯೂ ಧೀರತ್ವವೂ ಒಂದಕ್ಕಿಂತ ಮತ್ತೊಂದು ಅನ್ಯಾದೃಶಮಾಗಿರುವುವು. ಲೋಕದಲ್ಲಿ ಜನರು ಅರ್ಥಾರ್ಥಿಗಳಾಗಿ ಪ್ರಭುಗಳನ್ನನುವರ್ತಿಸುತ್ತ ದೈವಯೋಗದಿಂದ ಆ ಅರಸುಗಳಿಗೆ ಕಷ್ಟಮುಂಟಾದ ಸಮಯದಲ್ಲಿ ಅವರಂ ಬಿಡದೆ ಪುನಃ ಅವರ ಶ್ರೇಯಸ್ಸಂ ಚಿಂತಿಸುತ್ತ ಇರುವುದಂ ಕಂಡುಂಟು. ರಾಕ್ಷಸನೆಂದರೋ! ತನಗೆ ಪ್ರಭುಗಳಾದ ನಂದರು ನಿಶ್ಶೇಷಮಾಗಿ ಹತರಾದುದಂ ಕಂಡು ತಾನು ಭೋಗಾಸಕ್ತಿಯಂ ಬಿಟ್ಟು ಪರಲೋಕದಲ್ಲಿರುವ ನಂದರಿಗೆ ಸಂತೋಷಮಂ ಮಾಡುವೆನೆಂದು ಸ್ವಾಮಿಭಕ್ತಿಯನ್ನವಲಂಬಿಸಿ ನಂದರಿಗೆ ವಿರೋಧಿಯಾದ ಚಂದ್ರಗುಪ್ತನಂ ಜಯಿಸುವೆನೆಂಬುದಾಗಿ ಸಾಹಸಮಂ ಮಾಡುತ್ತ, ಈಗ ಸರ್ವಾರ್ಥಸಿದ್ಧಿಯು ಕಾಲಾಧೀನನಾದುದಂ ತಿಳಿದಿರುವವನಾದರೂ ತಾನು ಸಂಕಲ್ಪಿಸಿದ ಕಾರ್ಯಮಂ ನೆರವೇರಿಸುವೆನೆನ್ನುತ್ತ ಮಲಯಕೇತುವನ್ನಾಶ್ರಯಿಸಿ ದಂಡೆತ್ತಿ ಬರುವವನಾಗಿದ್ದಾನೆ. ಈ ಅರ್ಥಮಂ ನಾನು ಮೊದಲೇ ತಿಳಿದು ಅದಕ್ಕೆ ಪ್ರತೀಕಾರೋಪಾಯಮಂ ತಿಳುಹಿ ಭದ್ರಭಟಾದಿಗಳಂ ಕಳುಹಿಸಿರುವೆನು. ಇದರಿಂದ ಮಲಯಕೇತುವಿನ ಆಶ್ರಯವು ತಪ್ಪಿ ಅಮಾತ್ಯನು ತಾನಾಗಿ ಇಲ್ಲಿಗೆ ಬರುವಂತೆ ಆದೀತು. ಚಂದ್ರುಗುಪ್ತನು ಈ ಭಾರವೆಲ್ಲಮಂ ನನ್ನಲ್ಲಿ ನಿಲ್ಲಿಸಿ ನಾನು ಮಾಡುವ ಕಾರ್ಯಮಂ ನೋಡುತ್ತ ತಾನು ತಟಸ್ಥನಾಗಿ ಇದ್ದಾನೆ. ಲೋಕದಲ್ಲಿ ಅರಸುಗಳು ಬಹು ದ್ರವ್ಯಗಳಂ ಸಂಪಾದಿಸಿ ಸೇನೆಗಳಂ ಕಟ್ಟಿ ಶತ್ರುಗಳಂ ನಿಗ್ರಹಿಸಿದವರಾದರೂ, ಬಹು ಪ್ರಯತ್ನದಿಂ ರಾಜ್ಯವನ್ನಾಳುವರು. ಈ ನಮ್ಮ ಮೌರ್ಯತನಯನು ಅನಾಯಾಸದಿಂದ ರಾಜ್ಯಮಂ ಸಂಪಾದಿಸಿ ಸುಖಿಸುವಂತೆ ಉಳಿದ ಅರಸುಗಳಿಗೆ ಅದು ಲಭಿಸಲಾರದು. ಈಗ ರಾಕ್ಷಸನು ಸಹ ಕೈವಶನಾದರೆ ಚಂದ್ರಗುಪ್ತನ ಅದೃಷ್ಟಕ್ಕೆ ಎಣೆಯೇ ಇಲ್ಲವೆಂದು ಹೇಳುತ್ತಿರುವ ಸಮಯದಲ್ಲಿ—ಮೊದಲು ಅಮಾತ್ಯನ

ಮನೆಯ ಜನರಿರುವ ಸ್ಥಳಮಂ ತಿಳಿದು ಬಂದು ಹೇಳುವಂತೆ ನೇಮಿಸಲ್ಪಟ್ಟಿದ್ದ ಗೂಢಚಾರರೊಳಗೆ ಮರಾಳನೆಂಬವನು ಚಿತ್ರಪಟಗಳಂ ತೆಗೆದುಕೊಂಡು ತದನುಗುಣವೇಷಮಂ ಧರಿಸಿ ತಾಳಲಯಗಳಿಂದ ಗಾನಮಂ ಮಾಡುತ ಅಲ್ಲಲ್ಲಿ ಗುಂಪುಕೂಡಿ ನೋಡುವುದಕ್ಕಾಗಿ ಬಂದ ಜನಕ್ಕೆ ತನ್ನ ಚಿತ್ರಪಟಗಳಂ ತೋರಿಸಿ ಇದು ಸ್ವರ್ಗವು! ಸುಕೃತಿಗಳಿಗೆ ಪ್ರಾಪ್ಯಸ್ಥಾನವು. ಇದಕ್ಕೆ ನಿಯಾಮಕನು ಧರ್ಮಮೂರ್ತಿಯು. ಇದು ನರಕವು! ಈ ನರಕಸ್ಥಾನದಲ್ಲಿ ಪಾಪಿಗಳಂ ದಂಡಿಸುವ ಭಟರುಗಳಿರುವರು. ಇದಕ್ಕೆ ನಿಯಾಮಕನು ಯಮ ಮೂರ್ತಿಯು. ಇದು ಸತ್ಯವು! ಆದುದರಿಂದ ನೀವೆಲ್ಲರೂ ಧರ್ಮವನ್ನಾಚರಿಸಿ ಸದ್ಗತಿಗೆ ಪಾತ್ರರಾಗಿರಿ. ಪಾಪವನ್ನಾಚರಿಸಬೇಡಿರಿ ಎಂದು ಅಲ್ಲಲ್ಲಿ ಹೇಳುತ್ತ ಪ್ರತಿಗೃಹಂಗಳಂ ಹೊಕ್ಕು ಗೀತಮಂ ಪಾಡಿ ಯಾಚಿಸುತ್ತ ಆ ಬಳಿಕ ಚಂದನದಾಸನ ಮನೆಗೆ ಬಂದು ಅಲ್ಲಿಯೂ ಗೀತಮಂ ಪಾಡಿ ಚಿತ್ರಪಟಗಳಂ ತೋರಿಸುತ್ತ ಅಲ್ಲಿ ನಡೆದ ವಿದ್ಯಮಾನಮಂ ಚೆನ್ನಾಗಿ ನೋಡಿ ತಿಳಿದು ಮಾರ್ಗಂಗೊಂಡು ಚಾಣಕ್ಯನ ಪರ್ಣಶಾಲಾಸಮೀಪಕ್ಕೈತಂದು ಬಾಗಿಲಲ್ಲಿ ನಿಂತಿರುವ ಶಿಷ್ಯನಂ ಕುರಿತು—

ಅಯ್ಯಾ ಬ್ರಾಹ್ಮಣನೇ, ಬ್ರಹ್ಮಲೋಕದಲ್ಲಿರುವ ಮರಾಳಪಕ್ಷಿಯ ಭಾವಚಿತ್ರವು ನನ್ನಲ್ಲಿರುವುದು. ಇದಂ ನೋಡಿ ಇದರ ಅಭಿಪ್ರಾಯಮಂ ತಿಳಿದು ಹೇಳುವ ಪ್ರಾಜ್ಞರುಂಟೋ? ಎಂದು ಕೇಳಲು—

ಎಲೈ ಚಿತ್ರಪಟಧಾರಿಯೇ, ಈ ಅರ್ಥಮಂ ನಮ್ಮ ಗುರುಗಳಿಗೆ ವಿಜ್ಞಾಪಿಸಿ ಬರುವೆನು. ಸ್ವಲ್ಪ ಕಾಲ ನಿಲ್ಲು ಎಂದು ಹೇಳಿ ಒಳಹೊಕ್ಕು ಚಾಣಕ್ಯರಿಗೆ ಆ ಅರ್ಥಮಂ ತಿಳುಹಿಸಲು ಚಾಣಕ್ಯರು ಮರಾಳನೆಂಬ ನಮ್ಮ ಗೂಢಚಾರನಾಗಿರಬೇಕೆಂದು ತಿಳಿದು ಒಳಗೆ ಬರಲಿ ಎಂದು ಹೇಳಲು, ಆ ಮಾತಿಗೆ ಶಿಷ್ಯನು ಚಿತ್ರಪಟದವನಂ ಪರ್ಣಕುಟೀರಮಂ ಹೊಗಿಸಲು ಅವನಂ ನೋಡಿ ಚಾಣಕ್ಯನು—

ಎಲೈ ಮರಾಳನೇ, ಇಷ್ಟು ದಿವಸಗಳವರೆಗೂ ಯಾವ ಕಾರ್ಯಮಂ ನೋಡುತ್ತಿದ್ದೆ? ಚಂದ್ರಗುಪ್ತನಲ್ಲಿ ಯಾರಿಗೆ ಅನುರಾಗವಿರುವುದು? ಯಾರಿಗೆ ಅಸಹನಮುಂಟಾಗಿರುವುದು? ಎನಲು—

ಸ್ವಾಮಿಾ, ಈ ಪುರದಲ್ಲಿ ಮೂವರು ಹೊರತು ಉಳಿದ ಪ್ರಜೆಗಳೆಲ್ಲರೂ ಚಂದ್ರಗುಪ್ತನಲ್ಲಿ ಅನುರಕ್ತರಾಗಿರುವರು ಎಂದನು. ಆ ಮಾತಿಗೆ—

ಆ ಮೂವರಾರು ? ಎಂದು ! ಮರಳಿ ಚಾಣಕ್ಯನು ಕೇಳಲು ಮರಾಳನು—

ಸ್ವಾಮೀ, ರಾಕ್ಷಸನಿಗೆ ಮಿತ್ರನಾಗಿ ಚಂದ್ರಗುಪ್ತನ ಅಭ್ಯುದಯಮಂ ನೋಡಿ ಸಹಿಸಲಾರದೆ ಹಿಂದೆಮುಂದೆ ಆಡಿಕೊಳ್ಳುತ್ತಿರುವ ಜೀವಸಿದ್ಧಿಯೊಬ್ಬನು. ಅಮಾತ್ಯನಿಗೆ ಆಪ್ತರಾಯಸದವನಾಗಿರುವ ಲೋಕಾಯತ ಮತಸ್ಥನಾದ ಶಕಟದಾಸನೊಬ್ಬನು. ಸಚಿವನಿಗೆ ಪರಮಮಿತ್ರನಾಗಿ ಬುದ್ಧ ಮತಸ್ಥನಾದ ಚಂದನದಾಸನೆಂಬ ವರ್ತಕನೊಬ್ಬನು. ರಾಕ್ಷಸನು ಈ ಪುರಮಂ ಬಿಟ್ಟು ಹೋಗುವಲ್ಲಿ ತನ್ನ ಪತ್ನೀಪುತ್ರರಂ ಆ ಚಂದನದಾಸನ ಮನೆಯಲ್ಲಿ ಇಟ್ಟಿರುವಂತೆ ತಿಳಿದು ಇದೆ ಎಂದನು. ಚಾಣಕ್ಯನು ಕೇಳಿ—

ಎಲೈ ಮರಾಳನೇ, ಈ ಅರ್ಥವು ನಿನಗೆ ತಿಳಿದ ಪರಿ ಹೇಗೆ ? ಏನಲು ಮರಾಳನು—

ಸ್ವಾಮಿ, ನಾನು ಈ ಚಿತ್ರಪಟಗಳಂ ತೆಗೆದುಕೊಂಡು ಶ್ರುತಿಲಯಗಳಿಂ ಗಾನಮಂ ಮಾಡುತ್ತ ಪ್ರತಿ ಗೃಹಗಳಲ್ಲಿಯೂ ಪಟಮಂ ತೋರಿಸುತ್ತ ಅವರು ಕೊಟ್ಟುದಂ ಸ್ವೀಕರಿಸುತ್ತ ಹಾಗೇ ಚಂದನದಾಸನ ಮನೆಯಲ್ಲಿಯೂ ತೋರಿಸುತ್ತಿರುವಲ್ಲಿ, ಐದು ವರುಷದವನಾಗಿಯೂ ಅಮಾತ್ಯರಾಕ್ಷಸನ ಹೋಲಿಕೆಯುಳ್ಳ ರೂಪವಂತನಾಗಿಯೂ ಇರುವ ಹುಡುಗನು ಈ ನನ್ನ ಸಂಗೀತಮಂ ಕೇಳಿ ಬಾಲಸ್ವಭಾವದಿಂದ ಅಂತರ್ಗೃಹದಿಂ ಓಡಿಬಂದು ನನ್ನ ಪಟದ ಸಮೀಪದಲ್ಲಿ ನಿಂತನು. ಆ ಮಗುವಂ ನೋಡಿ ಮನಸ್ಸಿಗೆ ಸಂಶಯ ತೋರಿ ಅದನ್ನೇ ನಾನು ನಿರೀಕ್ಷಿಸುತ್ತಿರುವ ಸಮಯದಲ್ಲಿ ಆ ಹುಡುಗನು ಓಡಿ ಬಂದ. ಒಳಮನೆಯಲ್ಲಿ ಸ್ತ್ರೀಜನದ ಭೀತಿಗೆ ಅನುಗುಣವಾದ ಕಂಕಣರವದಿಂ ಮುಖರಿತಮಾದ ಕೈಚಪ್ಪಾಳೆಯ ಧ್ವನಿಯೂ ಮಗು ಓಡಿಹೋದುದಕ್ಕೆ ಭಯದಿಂದ ತಾನೇ ಹೇಳಿಕೊಡುವ ಹೆಂಗಸಿನ ವಚನವೂ ಸಹ ಕೇಳಬಂದುದರಿಂದ ಇದೇನೋ ಇಲ್ಲಿ ವಿಶೇಷವಿರುವುದು. ತಿಳಿಯಬೇಕೆಂದು ನಂದರ ಭಾವಚಿತ್ರಪಟಂಗಳಂ ಹರಡಿಕೊಂಡು ಅವುಗಳಲ್ಲಿ ಅಮಾತ್ಯರಾಕ್ಷಸನ ಭಾವ ಚಿತ್ರಮಂ ತೆಗೆದು ತೋರಿಸುತ್ತ ಗಾನಮಂ ಮಾಡಿ ಅವರ ಯಶಸ್ಸಂ ಹೊಗಳುತ್ತ ಸಾವಕಾಶಂಗೆಯ್ಯುತ್ತಿರಲು, ಆ ಸ್ತ್ರೀಯು ಆ ಅಂತರ್ಗೃಹದ ಬಾಗಿಲಲ್ಲಿ ಬಂದುನಿಂತು ಸನ್ನೆಯಂ ಮಾಡಿ ಕರೆದಾಗ್ಯೂ ಆ ಮಗುವು ಹೋಗದೆ ಪಟದ

ಬಳಿಯಲ್ಲೇ ನಿಂತಿದ್ದ ಕಾರಣದಿಂದ ಆಕೆಯು ತ್ವರೆಯಿಂದ ಬಂದು ಬಾಲನಂ ಜರೆದು ಅದರ ಭುಜಮಂ ಪಿಡಿದು ಸೆಳೆಯಲು ಆ ಅರ್ಭಕನು ಹೋರುತ್ತ ಪಟಮಂ ಬಿಟ್ಟು ಹೋಗದಿರಲು, ಆಕೆಯು ಸಮೀಪದಲ್ಲಿ ನಿಲ್ಲಿಸಿದ್ದ ನಂದರ ಮತ್ತು ಅಮಾತ್ಯರಾಕ್ಷಸನ ಭಾವಚಿತ್ರಗಳಂ ನೋಡಿ ಖಿನ್ನಳಾಗಿ ಕಂಬನಿಯಂ ತುಂಬುತ್ತ ಸೆರಗಿನಿಂ ಕಣ್ಣೀರ್ಗಳನೊರಸಿಕೊಳ್ಳುತ್ತ ಮಗುವಂ ಒಂದು ಕೈಯಲ್ಲಿ ಸೆಳೆದುಕೊಂಡು ಹೋಗುತ್ತಿರಲು, ಆ ಸ್ತ್ರೀಯ ಬೆರಳಿನಲ್ಲಿ ಪುರುಷನು ಧರಿಸತಕ್ಕ ವ್ಯಕ್ತವಾದ ಅಕ್ಷರದಿಂದ ಯುಕ್ತಮಾದ ಅಷ್ಟಕೋಣದ ಒಂದು ಮೋಹರಮಂ ಕಂಡೆನು. ಪೂರ್ಣಗರ್ಭಮಂ ಧರಿಸಿ ಮೆಲ್ಲಮೆಲ್ಲನೆ ತೆರಳಿದುದ ರಿಂದ ಆ ಮಾನಿನಿಯ ಸೌಂದರ್ಯಲಕ್ಷಣಂಗಳು ಸಾವಕಾಶಮಾಗಿ ತಿಳಿಯ ಬಂದವು. ಇದೆಲ್ಲಮಂ ಭಾವಿಸಿ ನೋಡಿದರೆ ರಾಕ್ಷಸನ ಪತ್ನೀಪುತ್ರರು ಚಂದನದಾಸನ ಮನೆಯಲ್ಲಿ ಪ್ರಚ್ಛನ್ನರಾಗಿ ಇದ್ದಾರೆಂಬುವುದು ನಿಶ್ಚಯ ವಾಗಿ ತೋರುತ್ತದೆ ಎನಲು, ಅದಂ ಕೇಳಿ ಚಾಣಕ್ಯನು ತನ್ನ ಮನದಲ್ಲಿ— ಇವನು ಹೇಳಿದುದೆಲ್ಲ ವಿಹಿತಮಾಗಿ ಕಾಣುತ್ತದೆ. ಅವಳ ಕೈಯಲ್ಲಿದ್ದ ಮೋಹರವು ರಾಕ್ಷಸನದಾಗಿದ್ದೀತು. ಅದು ನಮ್ಮ ಕರಗತವಾದರೆ ಬಹು ಕಾರ್ಯಕ್ಕೆ ಉಪಯುಕ್ತಮಾಗಬಹುದು ಎಂದು ನಿಶ್ಚಯಿಸಿ, ಅದಂ ಸಂಗ್ರಹಿಸುವ ಉಪಾಯವಂ ಯೋಚಿಸಿ—

ಎಲೈ ಮರಾಳಕನೇ, ನೀನು ಹೇಳಿದರ್ಥವು ತಿಳಿಯಬಂದಿತು. ಚಂದ್ರ-ಗುಪ್ತಾಭ್ಯುದಯ ನಿರೀಕ್ಷಣೆಯಲ್ಲಿ ಅಸಹನಭಾವಮುಳ್ಳ ಕ್ಷಪಣಕನೇ ಮೊದ ಲಾದ ಮೂವರಿಗೆ ತಕ್ಕುದಂ ಮಾಡಿಸುವೆವು. ನಿನ್ನ ಕೆಲಸದ ಮೇಲೆ ಇರುವವನಾಗು ಎಂದು ಅವನಂ ಕಳುಹಿಸಿ ಸಿದ್ಧಾರ್ಥಕನಂ ಕರಿಸಿ—

ಎಲೈ, ಚಂದನದಾಸನೆಂಬ ವರ್ತಕನ ಮನೆಯಲ್ಲಿ ರಾಕ್ಷಸನ ಹೆಂಡರು ಮಕ್ಕಳುಗಳಿರುವರು. ಆತನ ಪತ್ನಿಯ ಕೈಯಲ್ಲಿ ರಾಕ್ಷಸನ ಮುದ್ರೆ ಯುಂಗುರವಿರುವುದು. ಈ ರೀತಿಯಿಂದ ಆ ಮೋಹರಮಂ ತರಿಸು ಎಂದು ನೇಮಿಸಿ ರಾಯಸದವರ ಬಳಿಯಲ್ಲಿರುವ ರಾಕ್ಷಸನ ಮುದ್ರೆಯ ಕಾಗದಮಂ ತರಿಸಿ ಅದಂ ಸಿದ್ಧಾರ್ಥಕನ ಕೈಯಲ್ಲಿ ಕೊಟ್ಟು ಕಳುಹಿಸಲು ಚಾಣಕ್ಯರು ಆಜ್ಞಾಪಿಸಿದ ರೀತಿಗೆ ಸಿದ್ಧಾರ್ಥಕನು ಆ ಕಾಗದದಲ್ಲಿ ಒತ್ತಿರುವ ಮೋಹರದ ಪ್ರಕಾರ ಸುವರ್ಣದಿಂ ಮುದ್ರೆಯಂ ಮಾಡಿಸಿ ಹೇಳಿದ ಕಾರ್ಯಮಂ ನಿರ್ವಹಿಸುವ

ದರಲ್ಲಿ ನಿಪುಣೆಯಾದ ಓರ್ವ ಸೂಲಗಿತ್ತಿಯಂ ಏಕಾಂತದಲ್ಲಿ ಕರೆದು ಅವಳಿಗೆ ಸನ್ಮಾನವಾಗಿ ಆ ಮೋಹರಮಂ ಅವಳ ಕೈಯಲ್ಲಿ ಕೊಟ್ಟು, ಈ ರೀತಿಯಿಂದ ಅಮಾತ್ಯ ರಾಕ್ಷಸನ ಉಂಗುರಮಂ ತಂದು ಕೊಡುವವಳಾಗು ಎಂದು ನೇಮಿಸಿ, ಆ ಮಂತ್ರಸಾನಿಯಂ ಕಳುಹಿಸಿ ಪುರದ ತಳವಾರನಂ ಬರಿಸಿ—ಎಲೈ, ನೀನು ಹೇಳುವ ಪ್ರಕಾರದಿಂದ ಈ ದಿನ ಪಟ್ಟಣದೊಳ್ ನಡೆದ ವೃತ್ತಾಂತಮಂ ತಿಳಿಸುವಲ್ಲಿ ವಿಶೇಷವಾಗಿ ಇದೊಂದು ವರ್ತಮಾನಮಂ ವಿಜ್ಞಾಪಿಸುವವ ನಾಗು ಎಂದು ಹೇಳಿ ಕಳುಹಿಸಲು, ಅದೇ ರೀತಿಗೆ ಆ ತಳವಾರನು ತನ್ನ ವೇಳೆಯಲ್ಲಿ ಹೋಗಿ ಆಸ್ಥಾನದಲ್ಲಿ ಕುಳಿತಿದ್ದ ಚಾಣಕ್ಯರಿಗೆ ಕೈಮುಗಿದು ಆ ದಿನದಲ್ಲಿ ನಡೆದ ಪುರದ ವಾರ್ತೆಯಂ ಹೇಳುತ್ತಿರುವಲ್ಲಿ—ಸ್ವಾಮಿಾ, ಈ ದಿವಸ ಒಬ್ಬ ಬ್ರಾಹ್ಮಣ ಸ್ತ್ರೀಯ ಪ್ರಸವಸಮಯದಲ್ಲಿ ಒಬ್ಬ ಸೂಲಗಿತ್ತಿಯು ಏನೋ ಮತ್ಸರದಿಂದ ಆ ಶಿಶುವಂ ಘಾತಿಸಿ ವಂಚಿಸಿ ಓಡಿಹೋದಳು ಎಂದು ಹೇಳಿದ ಮಾತಿಗೆ ಚಾಣಕ್ಯನು ಅತಿಕ್ರುದ್ಧನಾದವನಂತೆ ಕೋಪಿಸಿಕೊಂಡು—ಎಲೈ, ಈ ಪುರದಲ್ಲಿ ಇಂಥ ಕಾರ್ಯವು ಎಷ್ಟು ನಡೆದಿರುವುದೋ ? ಈ ನಗರದ ಮಂತ್ರಸಾನಿಯರೆಲ್ಲರಂ ಹಿಡಿತಂದು ವಿಚಾರಿಸಿ ದಂಡಿಸಿರಿ. ಮುಂದೆ ಈ ಕೃತ್ಯವು ನಡೆಯದಂತೆ ಮಾಡುವವನಾಗು ಎಂದು ನೇಮಿಸಿ ಕಳುಹಿಸಲು ಅದೇ ರೀತಿಗೆ ತಳವಾರರು ಬೀದಿಬೀದಿಗಳಂ ಹುಡುಕಿ ಸೂಲಗಿತ್ತಿಯರುಗಳಂ ಹಿಡಿದುಕೊಂಡು ಹೋಗುತ್ತಿರಲು, ಆ ವೇಳೆಯಲ್ಲಿ ಸಿದ್ಧಾರ್ಥಕನಿಂದ ನೇಮಿಸಿದ ಸೂಲಗಿತ್ತಿಯು ತ್ವರಿತದಿಂ ಹೋಗಿ ಚಂದನದಾಸನ ಗೃಹದ ನಡುವೆಯ ಬಾಗಿಲಿನ ಮರೆಯಲ್ಲಿ ಅತಿಭೀತಿಯಿಂ ನಡುಗುವವಳಂತೆ ನಿಂತಿರಲಾಗಿ ಅವಳಂ ಕಂಡು ಆ ಮನೆಯ ಜನರು—ನೀನು ಯಾರು ? ಯಾಕೆ ಬಂದೆ ? ಎನಲು ಅವಳು ಎಲ್ಲರ ಕಾಲುಗಳಂ ಕಟ್ಟಿಕೊಳ್ಳುತ್ತ—ಅಕ್ಕಂದಿರಾ, ಅರಮನೆಯ ವರು ಈ ಪೊಳಲ ಮಂತ್ರಸಾನಿಯವರೆಲ್ಲರನ್ನೂ ಹಿಡಿದು ಎಲ್ಲೋ ದೇಶಾಂತ ರಕ್ಕೆ ಕಳುಹಿಸುವರಂತೆ. ನಾನು ನಾಲ್ಕು ಮಕ್ಕಳುಳ್ಳವಳು. ಈ ಅವಾಂತರ ನಿಲ್ಲುವವರೆಗೂ ನಾಲ್ಕು ದಿವಸ ಎಲ್ಲಿಯಾದರೂ ಕಣ್ಣಿಗೆ ಮರೆಯಾಗಿರಬೇಕು ಎನಲು, ಅದಂ ಕೇಳಿ ಚಂದನದಾಸನ ಸತಿಯು—ನಮ್ಮ ಅಮಾತ್ಯರ ಪತ್ನಿಗೆ ಪ್ರಸವಕಾಲ ಸನ್ನಿಹಿತವಾಗಿರುವುದಷ್ಟೆ. ಆ ಸಮಯಕ್ಕೆ ಸೂಲಗಿತ್ತಿಯರು ದೊರಕುವರೋ ದೊರಕುವುದಿಲ್ಲವೋ ? ಆದುದರಿಂದ ಇವಳು ಇಲ್ಲಿ ಇರ ಬೇಕು ಎಂದು ಬಗೆದು—

ಎಲ್ಫೆ ಮಂತ್ರಸಾನಿಯೇ, ನಿನ್ನಿಂದ ನಮಗೆ ಕೆಲಸಮುಂಟು; ಅನ್ಯತ್ರ ಹೋಗಬೇಡ. ನಮ್ಮ ಮನೆಯಲ್ಲೇ ಇರುವವಳಾಗು ಎನಲು ಅವಳು— ನಮ್ಮಪ್ಪಾ! ನಾನು ಬದುಕಿದೆನು. ಹಾಗೇ ಆಗಲಿ ಎಂದು ಅಲ್ಲೇ ಇರುತ್ತಿದ್ದಳು. ಮತ್ತೊಂದು ದಿವಸ ರಾಕ್ಷಸನ ಭಾರ್ಯೆಗೆ ಪ್ರಸವವೇದನೆ ತೋರಲು ಆ ಸೂಲಗಿತ್ತಿಯಂ ಸೂತಿಕಾಗೃಹಕ್ಕೆ ಕಳುಹಿದರು. ಅವಳು ಲೋಕದ ಸೂಲಗಿತ್ತಿಯರೆಲ್ಲರಿಗಿಂತಲೂ ಅತಿಶಯವಾಗಿ ರಾಕ್ಷಸನ ಪತ್ನಿಯಂ ಸಂತೈಸುತ್ತಿರಲು, ಆಕೆ ಸ್ತ್ರೀಯರುಗಳ ಕಟ್ಟಳೆಯ ಮೇರೆಗೆ ಆಭರಣಂಗಳಂ ಸಡಿಲಿಸಿ ಮಂತ್ರಸಾನಿಯ ವಶಮಂಮಾಡಿ ಉಟ್ಟಿದ್ದ ಸೀರೆಯಂ ಬಿಚ್ಚಿ ಮತ್ತೊಂದು ಅರಿವೆಯನ್ನುಟ್ಟು ಪ್ರಸವವೇದನೆಯನ್ನನುಭವಿಸುತ್ತ ಶಿಶುವಂ ಹಡೆಯುತ್ತಿರಲು, ಇವಳು ಆ ವೇಳೆಯೊಳ್ ಭೂಷಣಂಗಳ ಜೊತೆಯಲ್ಲಿದ್ದ ರಾಕ್ಷಸನ ಮೋಹರಮಂ ತೆಗೆದುಕೊಂಡು ಸಿದ್ಧಾರ್ಥಕನು ಕೊಟ್ಟಿದ್ದ ಮುದ್ರೆಯು ಉಂಗುರಮಂ ತೊಡವುಗಳ ಜೊತೆಯಲ್ಲಿರಿಸಿ, ಅಲ್ಲಿನ ಕಾರ್ಯಮಂ ನೇರವೇ-ರಿಸಿ ಆಕೆಯ ಒಡವೆಗಳಂ ಮುಂದುಗಡೆಯಲ್ಲಿ ಲೆಕ್ಕಮಂ ಮಾಡಿ ಅವಳಿಗೆ ಒಪ್ಪಿಸಿ ಬಂದು ಚಂದನದಾಸನ ಪತ್ನಿಯನ್ನಪ್ಪಣೆಯಂ 'ಕೇಳಲು, ಆಕೆಯು ಸೂಲಗಿತ್ತಿಗೆ ಸನ್ಮಾನಮಂ ಮಾಡಿ ವೀಳೆಯಂಗೊಟ್ಟು ಕಳುಹಿಸಿದಳು. ಆ ಬಳಿಕ ಅವಳು ಬಂದು ಆ ಮೋಹರವನ್ನು ಸಿದ್ಧಾರ್ಥಕನ ಕೈಗೆ ಒಪ್ಪಿಸಲು ಅವನು ಅದನ್ನು ತೆಗೆದುಕೊಂಡು ಚಾಣಕ್ಯರ ವಶಕ್ಕೆ ಕೊಟ್ಟನು. ಅದಂ ಚಾಣಕ್ಯನು ನೋಡಿ ಮರಾಳಕನು ಹೇಳಿದ ಮೇರೆ ಅಷ್ಟಕೋಣವಾಗಿಯೂ ರಾಕ್ಷಸನ ಹೆಸರುಳ್ಳುದಾಗಿಯೂ ಪುರಾತನವಾಗಿಯೂ ಇರುವದರಿಂದ ಈ ಆಂಗುಳೀಯಕವು ರಾಕ್ಷಸನದೇ ಹೌದು ಎಂದು ನಿರ್ಣಯಿಸಿ, ತನ್ನ ಮನಸ್ಸಿನಲ್ಲಿ—ಈ ಮುದ್ರೆಯು ದೊರಕಿದ ಕಾರಣದಿಂದ ಮಲಯಕೇತುವನ್ನನುವರ್ತಿಸಿರುವ ರಾಕ್ಷಸನಿಗೆ ಆ ರಾಜಪುತ್ರನಿಂದಲೇ ತಿರಸ್ಕಾರಮುಂಟಾಗಿ ಆತನು ತಾನಾಗಿ ನಮ್ಮಲ್ಲಿಗೆ ಬರುವಂತೆ ಮಾಡುವೆನೆಂದು ನಿಶ್ಚಯಿಸಿ ತನ್ನ ಬಳಿಗೆ ಅಮಾತ್ಯನು ಬರುವ ಪರಿಯಂತರವೂ ಮಾಡತಕ್ಕ ಪ್ರಯತ್ನಮಂ ಯೋಚಿಸಿ ಇಂಥವರ ಬಳಿಯಿಂದ ಇಂಥವರ ಬಳಿಗೆಂಬುದಾಗಿ ಒಬ್ಬರ ಹೆಸರನ್ನೂ ಕಾಣಿಸದೆ ಒಂದು ಕಾಗದದಲ್ಲಿ ಪ್ರಕೃತೋಚಿತವಾದ ಸಂಗತಿಗಳಂ ಬರೆದು ಸಿದ್ಧಾರ್ಥಕನಂ ರಹಸ್ಯದಲ್ಲಿ ಕುಳ್ಳಿರಿಸಿಕೊಂಡು—

ಎಲೈ ಆಪ್ತನೇ, ಒಂದು ಕಾರ್ಯಾರ್ಥಮಾಗಿ ಬರೆದಿರುವ ಈ ಪತ್ರಿಕೆಯಲ್ಲಿನ ಅಕ್ಷರಗಳು ವೈದಿಕಲಿಪಿಯಾದುದರಿಂದ, ನಿನಗೆ ಪರಿಚಿತನಾಗಿರುವ ಶಕಟದಾಸನ ಅಕ್ಷರದಲ್ಲಿ ಸ್ಫುಟವಾಗಿ ಬೇರೆ ಪತ್ರಿಕೆಯನ್ನು ಬರೆಸಿಕೊಂಡು ಬರುವವನಾಗು ಎಂದು ಪತ್ರಮಂ ಅವನ ಕೈಯಲ್ಲಿ ಕೊಡಲು, ಮಹಾಪ್ರಸಾದಮೆಂದು ಸಿದ್ಧಾರ್ಥಕನು ಅದಂ ತೆಗೆದುಕೊಂಡು ಶಕಟದಾಸನ ಬಳಿಗೆ ಹೋಗಿ ಆ ಕಾಗದಮಂ ತಾನು ಮೊದಲು ನೋಡಿಕೊಂಡು ಚಾಣಕ್ಯರು ಏನೋ ಮಹತ್ಕಾರ್ಯಮಂ ಯೋಚಿಸಿ ಅನ್ಯರಿಗೆ ತಿಳಿಯದಂತೆ ಈ ಪತ್ರಿಕೆಯಂ ಲೇಖನಗೊಳಿಸಿದ್ದಾರೆ. ಇದರ ಫಲಮಂ ಪರ್ಯವಸಾನದಲ್ಲಿಯೇ ಹೊರತು ಈಗ ತಿಳಿಯಕೂಡದೆಂದು ಬಗೆದು ಶಕಟದಾಸನ ಸಂಗಡ ಪ್ರಕೃತೋಚಿತಹಾಗಿ ಮಾತಾಡುತ್ತ ಕೆಲವು ಹೊತ್ತಿನ ಮೇಲೆ ತನ್ನ ಬಳಿಯಲ್ಲಿದ್ದ ಕಾಗದಮಂ ಆತನ ಕೈಯಲ್ಲಿ ಕೊಟ್ಟು—

ಅಯ್ಯಾ ಶಕಟದಾಸನೇ, ಈ ಪತ್ರದಲ್ಲಿ ಒಂದು ಕೌತುಕಮುಂಟು. ಇದು ಪ್ರಾಕೃತವಾಕ್ಯದಿಂದ ಬರೆದಿರುವುದಾದರೂ ಇದರ ಅಕ್ಷರಗಳಂ ವ್ಯತ್ಯಸ್ತಮಾಗಿ ಪ್ರಯೋಗಿಸಿದರೆ ಸಂಸ್ಕೃತಶ್ಲೋಕಗಳಾಗುತ್ತಿವೆ. ಆ ಶ್ಲೋಕಂಗಳಂ ಪ್ರತಿಲೋಮವಾಗಿ ಬರೆದರೆ ಚಿತ್ರಬಂಧಗಳು ಆಗುತ್ತಿವೆ. ಅದುಕಾರಣ ಸ್ಫುಟವಾಗಿ ಇನ್ನೊಂದು ಪ್ರತಿಯಂ ಬರೆಯುವವನಾಗು. ಈ ಲಿಪಿಗಳು ಸಂದಿಗ್ಧಮಾಗಿವೆ. ಒಬ್ಬ ಕವೀಶ್ವರನು ಬರೆದು ಇದರ ಪದ್ಧತಿಯಂ ಹೇಳಿದನು ಎನಲು, ಆಗ ಶಕಟದಾಸನು ತನ್ನ ಕೈಬರಹದಿಂದ ಬೇರೇ ಪ್ರತಿಯಂ ಬರೆದು ಸಿದ್ಧಾರ್ಥಕನ ಕೈಯಲ್ಲಿ ಕೊಟ್ಟು—ಇದರ ಪದ್ಧತಿ ಏನು? ಎಂದು ಕೇಳಲು, ಸಿದ್ಧಾರ್ಥಕನು ಸ್ವಲ್ಪ ಹೊತ್ತು ಯೋಚಿಸುವವನಂತೆ ಇದ್ದು ನೋಡಿ—ಅಯ್ಯಾ ಶಕಟದಾಸನೇ, ಕವೀಶ್ವರನು ಹೇಳಿದ ಕ್ರಮವು ಸ್ವಲ್ಪ ವಿಸ್ಮೃತವಾದಂತೆ ಇದೆ. ಇದನ್ನು ಇನ್ನೊಂದು ವೇಳೆ ಕೇಳಿ ತಿಳಿದು ಹೇಳುವೆನೆಂಬುದಾಗಿ ಉಸುರಿ ಅಲ್ಲಿಂದ ಹೊರಟು ಆ ಕಾಗದಮಂ ಚಾಣಕ್ಯರ ಕೈಯಲ್ಲಿ ಕೊಡಲು, ಆತನು ಅದಂ ನೋಡಿಕೊಂಡು ಆ ಪತ್ರಮಂ ಮಡಿಸಿ ತನ್ನ ಬಳಿಯಲ್ಲಿದ್ದ ರಾಕ್ಷಸನ ಮುದ್ರೆಯುಂಗುರದಿಂದ ಅದಕ್ಕೆ ಮೋಹರಮಂ ಮಾಡಿ ಆ ಬಳಿಕ ಸಿದ್ಧಾರ್ಥಕನಂ ಕರೆದು—

ಎಲೈ ನಮಗೆ ಪ್ರಿಯನಾದ ಸಿದ್ಧಾರ್ಥಕನೇ, ಈಗಿನವರೆಗೆ ಚಂದ್ರ-

ಗುಪ್ತನ ಕೆಲಸವು ನಿನ್ನಿಂದ ಬಹಳವಾಗಿ ಅನುಕೂಲಿಸಿತು. ಕಾರ್ಯಘಟನೆಯಲ್ಲಿ ಸಮರ್ಥನಾದುದರಿಂದ ನಿನಗೆ ಇನ್ನೊಂದು ಕೆಲಸಮಂ ಹೇಳುವೆನು. ಅದಂ ಉಸುರಿದ ರೀತಿಗೆ ಸಾಧಿಸುವವನಾಗು ಎಂದು ಹೇಳತಕ್ಕ ಮಾತುಗಳೆಲ್ಲಮಂ ಅವನ ಕಿವಿಯಲ್ಲಿ ಹೇಳಿ, ಆ ಕಾಗದವನ್ನೂ ರಾಕ್ಷಸನ ಮೊಹರವನ್ನೂ ಸಹ ಆ ಸಿದ್ಧಾರ್ಥಕನ ಕೈಯಲ್ಲಿ ಕೊಟ್ಟು, ಹೋಗಿ ಬಾರೆಂದು ಕಳುಹಿಸಿ, ಈ ಲೇಖನಕ್ಕೆ ಅನುಕೂಲಮಾಗಿ ಮೊದಲು ಬೊಕ್ಕಸದಲ್ಲಿ ಕಟ್ಟಿಸಿ ಇಡಿಸಿರುವ ಪರ್ವತರಾಜನ ಆಭರಣಗಳು ರಾಕ್ಷಸನಿಗೆ ಸೇರುವಂತೆ ಮಾಡಿಸಬೇಕೆಂದು ಯೋಚಿಸುತ್ತಿರಲು, ಚಂದ್ರಗುಪ್ತನ ಅಪ್ಪಣೆಯಿಂದ ಅಂತಃಪುರದ ಕಂಚುಕಿಯೊಬ್ಬನು ಬಂದು ಚಾಣಕ್ಯರಂ ಕಂಡು ಕೈಮುಗಿದು—

ಸ್ವಾಮಿಾ, ಈ ದಿವಸ ಪರ್ವತೇಶ್ವರನಿಗೆ ಮಾಡಿಸಿದ ಪರಲೋಕಕ್ರಿಯೆಗಳೆಲ್ಲವೂ ಪರಿಸಮಾಪ್ತಮಾದುವು. ಆತನು ಅಲಂಕರಿಸಿದ್ದ ಆಭರಣಂಗಳು ಬೊಕ್ಕಸದಲ್ಲಿ ಇಡಿಸಿ ಇವೆಯಷ್ಟೆ. ಇದಕ್ಕೆ ಅಪ್ಪಣೆ ಏನು? ಎಂದು ಚಂದ್ರಗುಪ್ತಮಹಾರಾಜರು ವಿಜ್ಞಾಪಿಸಿ ಬಾರೆಂದು ನನ್ನಂ ಕಳುಹಿಸಿದರು ಎಂಬುದಾಗಿ ಅರಿಕೆಮಾಡಲು ಅದಂ ಕೇಳಿ ಚಾಣಕ್ಯನು—ನಾನು ಯೋಚಿಸಿದ್ದ ಅರ್ಥವನ್ನೇ ಚಂದ್ರಗುಪ್ತನು ಹೇಳಿ ಕಳುಹಿಸಿದನು. ಉತ್ತಮವಾಯಿತು ಎಂದು ತಿಳಿದು ಆ ಕಂಚುಕಿಯಂ ಕುರಿತು—

ಎಲೈ ಶೋಣಕನೇ, ಪರ್ವತರಾಜನ ಮಂಡನವು ಅಮೂಲ್ಯವಾದುದರಿಂದ ಅದರ ದಾನಕ್ಕೆ ಪಾತ್ರರಾದವರನ್ನು ಪರೀಕ್ಷಿಸಿ ಸಂಗ್ರಹಿಸಿದ್ದೇನೆ. ಈ ಬ್ರಾಹ್ಮಣರಂ ಕರೆದುಕೊಂಡು ಹೋಗಿ ನಾವು ಹೇಳಿದೆವೆಂದು ಆ ಭೂಷಣಂಗಳಂ ಇವರಿಗೆ ಕೊಡಿಸುವವನಾಗೆಂಬುದಾಗಿ ನಿರೂಪಿಸಿ ತನಗೆ ಅನುಕೂಲರಾದ ವಿಶ್ವಾವಸು ಎಂಬ ಭೂಸುರನೇ ಮುಖ್ಯರಾದ ಮೂರುಮಂದಿ ವಿಪ್ರರಂ ಕರೆದು—

ಅಯ್ಯಾ ವಿದ್ಯಾಸಂಪನ್ನರಾದ ಬ್ರಾಹ್ಮಣರುಗಳಿರಾ, ಈ ದಿವಸ ಚಂದ್ರಗುಪ್ತನು ನಿಮಗೆ ಆಭರಣಂಗಳಂ ಕೊಡುವನು. ನೀವು ಅಲಂಕರಿಸಿಕೊಂಡು ಇಲ್ಲಿಗೆ ಬಂದರೆ ಸುಪ್ರೀತರಾದ ನಿಮ್ಮಂ ನೋಡಿ ಸಂತೋಷಪಡುವೆನು. ಈ ಕಂಚುಕಿಯ ಸಂಗಡ ಹೋಗಿರಿ ಎಂದು ಹೇಳಿ ಮತ್ತೊಂದು ಕಾರ್ಯಗೌರವಮಂ ಯೋಚಿಸಿ ಆ ಕಂಚುಕಿಯಂ ಕುರಿತು—

ಎಲೈ ಶೋಣಕನೇ, ನಾವು ಹೇಳಿದೆವೆಂದು ನಿಮ್ಮ ಅರಸಿಗೆ ಅರಿಕೆ ಮಾಡುವುದೇನಂದರೆ—ನೀನು ಪ್ರಭುವಾಗಿ ರಾಜ್ಯವಿಚಾರಮಂ ಮಾಡುವಲ್ಲಿ ಯಾವದೊಂದು ವಿಷಯಕ್ಕಾದರೂ ನಮ್ಮ ಬಳಿಗೆ ಹೇಳಿಕಳುಹಿಸಿ ಕಾರ್ಯಮಂ ಮಾಡುತ್ತಿದ್ದರೆ, ಇನ್ನೆಷ್ಟು ದಿವಸಕ್ಕೆ ನಿನಗೆ ರಾಜ್ಯಭಾರದಲ್ಲಿ ಬುದ್ಧಿ ಸ್ಫುರಿಸ ಬೇಕು ? ಇನ್ನು ಮೇಲೆ ಸ್ವರಾಷ್ಟ್ರವಿಚಾರವೇನಿದ್ದರೂ ವಿಮರ್ಶೆಯಿಂದೆಸಗುತ್ತ ಪರರಾಷ್ಟ್ರ ವಿಚಾರದಲ್ಲಿ ಮಾತ್ರ ನಮಗೆ ತಿಳುಹಿಸಿ ಮಾಡುವವನಾಗು. ಈ ಪ್ರಕಾರವಾಗಿ ಚಂದ್ರಗುಪ್ತನಿಗೆ ಹೇಳುವಂತೆ ಅವನಿಗೆ ಕಟ್ಟುಮಾಡಿ ಕಳುಹಿಸಲು, ಆ ಕಂಚುಕಿಯು ಬ್ರಾಹ್ಮಣರೊಡನೆ ಕೂಡಿದವನಾಗಿ ಬಂದು ಚಂದ್ರಗುಪ್ತನಂ ಕಂಡು ಕೈಮುಗಿದು ನಿಂತು—

ಜೀಯಾ, ಪರ್ವತರಾಜನ ಭೂಷಣದಾನಕ್ಕೆ ಉತ್ತಮಪಾತ್ರರೆಂದು ತಿಳಿದು ಚಾಣಕ್ಯರು ಇವರಂ ಕಳುಹಿಸಿದ್ದಾರೆ. ಮತ್ತು ಯಾವ ಕಾರ್ಯವಾದರೂ ಸ್ವರಾಷ್ಟ್ರ ವಿಷಯಕವಾಗಿದ್ದರೆ ಪ್ರಭುವಾಗಿರುವುದರಿಂದ ಅದೆಲ್ಲಮಂ ಸ್ವತಂತ್ರವಾಗಿ ತಾವೇ ನೋಡುತ್ತ ಪರರಾಷ್ಟ್ರವಿಷಯಕವಾದ ಕಾರ್ಯವೇನಿದ್ದರೂ ತಮಗೆ ತಿಳುಹಿಸಿ ಮಾಡತಕ್ಕುದು ಎಂದು ಯಜಮಾನರಾದ ಚಾಣಕ್ಯರ ಅಪ್ಪಣೆಯಾಗಿದೆ ಎನಲು, ಅದಂ ಕೇಳಿ ಚಂದ್ರಗುಪ್ತನು ಪರ್ವತರಾಜನ ಆಭರಣಗಳಂ ತರಿಸಿ ಆ ವಿಶ್ವಾವಸು ಮುಖ್ಯರಾದ ಬ್ರಾಹ್ಮಣರಿಗೆ ಅಲಂಕರಿಸಿ ಅವರಂ ಕಳುಹಿಸಿ ಆ ಬಳಿಕ ಚಾಣಕ್ಯರು ಹೇಳಿಕಳುಹಿಸಿದ ವಾಕ್ಯಮಂ ನೆನೆದು ಏನೋ ಒಂದು ಕಾರ್ಯಾರ್ಥವಾಗಿ ತಮ್ಮನ್ನಪೇಕ್ಷಿಸದೆ ಸ್ವದೇಶವಿಚಾರಮಂ ಮಾಡುವಂತೆ ಯಜಮಾನರು ತನಗೆ ಹೇಳಿಕಳುಹಿಸಿದ ಬಳಿಕ ಎಂದಿನಂತೆ ನಾನು ಸುಮ್ಮನಿದ್ದರೆ ನಿಷ್ಠುರಕ್ಕೆ ಯೋಗ್ಯನಾದೇನೆಂದು ತಿಳಿದು ಸ್ವರಾಜ್ಯದ ವಿಚಾರಮಂ ಪರಾಪೇಕ್ಷೆಯಿಲ್ಲದೇ ತಾನೇ ಮಾಡುತ್ತಿದ್ದನು.

ಅನಂತರದಲ್ಲಿ ಪರ್ವತರಾಜನ ಆಭರಣಂಗಳಿಂದ ಅಲಂಕೃತರಾಗಿ ತನ್ನ ಬಳಿಗೆ ಬಂದ ವಿಶ್ವಾವಸು ಮುಖ್ಯರಾದ ದ್ವಿಜರಂ ನೋಡಿ ಚಾಣಕ್ಯನು— ಎಲೈ ಆಪ್ತರಾದ ವಿಪ್ರೋತ್ತಮರುಗಳಿರಾ, ಏನೋ ಒಂದು ಕಾರ್ಯಾರ್ಥವಾಗಿ ಆಭರಣದಾನಮಂ ನಿಮಗೆ ಕೊಡಿಸಿದೆನು. ಈಗ ಮಲಯಕೇತುವನ್ನಾಶ್ರಯಿಸಿ ಪರ್ವತರಾಜ್ಯದಲ್ಲಿರುವ ಅಮಾತ್ಯರಾಕ್ಷಸನ ಗೃಹಸಮೀಪದಲ್ಲಿ

ವರ್ತಕರ ವೇಷಮಂ ಧರಿಸಿ ನೀವು ಅಲಂಕರಿಸಿರುವ ಈ ಆಭರಣಂಗಳಂ ಮೂರು ಸಂಪುಟದಲ್ಲಿರಿಸಿಕೊಂಡು ಆ ಅಮಾತ್ಯನ ಬಳಿಗೆ ಹೋಗುವ ಬರುವ ಆಪ್ತಜನರ ಮುಖದಿಂದ ಈ ಭೂಷಣಗಳಂ ಕ್ರಯಕ್ಕೆ ಕೊಡುವೆವು ಎಂದು ಹೇಳಿ ಕಳುಹಿಸಿ ರಾಕ್ಷಸನಲ್ಲಿ ಅಗ್ಗವಾಗಿಯಾದರೂ ಕ್ರಯಕ್ಕೆ ಹೊಂದಿಸಿ ಅದರ ಮೌಲ್ಯಧನವನ್ನು ಯಥಾರ್ಥವಾಗಿ ನೀವೇ ತೆಗೆದುಕೊಳ್ಳಿರಿ. ಎಷ್ಟು ಕಡಮೆಯಾದರೂ ಮೂರುಲಕ್ಷದ್ರವ್ಯಕ್ಕೆ ಕಡಮೆಯಾಗದು. ಈ ಕಾರ್ಯಮಂ ಮಾಡಿ ಬಂದು ನಮಗೆ ತಿಳುಹಿಸಿರಿ ಎಂದು ಆ ಬ್ರಾಹ್ಮಣರಂ ಕಳುಹಿಸಿ ತನ್ನ ಬಳಿಯಣ ಶಿಷ್ಯನಂ ಕರೆದು—

ಎಲೈ ಕುಶಬರ್ದ್ಧಿಯೇ, ಜೀವಸಿದ್ಧಿ ಎಂಬ ಕ್ಷಪಣಕನು ರಾಕ್ಷಸನಿಂದ ಪ್ರೇಷಿತನಾಗಿ ವಿಷಕನ್ಯೆಯಂ ಪರ್ವತರಾಜನಿಗೆ ಒಪ್ಪಿಸಿ ಅವನಿಗೆ ಸಂಹಾರಂ ಗೆಯ್ಸಿದುದರಿಂದ ದ್ರೋಹಿಯಾದ ಅವನನ್ನು ಚಂದ್ರಗುಪ್ತರ ಅಪ್ಪಣೆಯ ಮೇರೆಗೆ ಪುರದಿಂ ಹೊರಡಿಸುವೆವೆಂದು ಸಾರುತ್ತ ಆ ಜೀವಸಿದ್ಧಿಯಂ ಹೊರಡಿಸುವಂತೆ ನಾವು ಆಜ್ಞಾಪಿಸಿದ್ದೇವೆಂಬುದಾಗಿ ತಳವಾರನಾದ ದಂಡಕನಿಗೆ ಹೇಳಿಬಾರೆಂದು ಕಳುಹಿಸಲು ಅವನು ಹೋಗಿ ಉಸುರಿ ಬಂದು ಅಪ್ಪಣೆಯ ಪ್ರಕಾರ ಊರುಗಾವಲವನು ಕ್ಷಪಣಕನನ್ನು ಹೊರಡಿಸಿದನೆಂದು ತಿಳುಹಿಸಿದನು.

ಆ ಬಳಿಕ ಚಾಣಕ್ಯನು ಇನ್ನೊಬ್ಬ ಶಿಷ್ಯನಂ ಕರೆದು—ಎಲೈ ಪಶುಲೋಮಕನೇ, ಅಮಾತ್ಯನಿಗೆ ಮಿತ್ರನಾದ ಶಕಟದಾಸನು ಈ ಊರಲ್ಲಿ ಇದ್ದುಕೊಂಡು ದಾರುವರ್ಮಾದಿಗಳಿಗೆ ಸಹಾಯಕನಾಗಿ ಚಂದ್ರಗುಪ್ತನಿಗೆ ದ್ರೋಹಮಂ ಎಣಿಸಿದುದರಿಂದ ಆ ಪ್ರಭುವಿನ ಅಪ್ಪಣೆಯ ಮೇರೆಗೆ ಈ ಶಕಟದಾಸನಂ ಶೂಲಕ್ಕೆ ಹಾಕುವೆವೆಂದು ಸಾರಿಕೊಂಡು ಹೋಗಿ ಅವನಂ ಶೂಲಾರೋಹಣಮಂ ಮಾಡಿಸುವಂತೆ ನಾವು ಹೇಳಿದುದಾಗಿ ದಂಡಪಾಶಕನಿಗೆ ತಿಳಿಸಿಬಾರೆಂದು ಉಸುರಿ ಕಿವಿಯಲ್ಲಿ ಮತ್ತೊಂದು ವಾಕ್ಯಮಂ ಸೂಚಿಸಲು, ಅವನು ಅದೇ ಪ್ರಕಾರ ಹೋಗಿ ಬಂದು ಶಕಟದಾಸನಂ ಹಿಡಿತರುವುದಕ್ಕೆ ದಂಡಪಾಶಕನು ಹೋದನೆಂದು ಚಾಣಕ್ಯನಿಗೆ ಬಿನ್ನೈಸಿದನು.

ಅನಂತರ ಚಾಣಕ್ಯನು ಬೇರೊಬ್ಬ ಶಿಷ್ಯನಂ ಕರೆದು—ಎಲೈ ಶೀಘ್ರಕಾರಿಯೇ, ಬಳೆಗಾರಸೆಟ್ಟಿಯಾದ ಚಂದನದಾಸನಂ ಕರೆದುಕೊಂಡು ಬಾರೆಂದು

ಹೇಳಲು, ಅವನು ಹೋಗಿ ಚಾಣಕ್ಯನ ಅಪ್ಪಣೆಯನ್ನು ಚಂದನದಾಸನಿಗರುಹಿದನು. ಆ ಸೆಟ್ಟಿಯು ತನ್ನ ಮನಸ್ಸಿನಲ್ಲಿ—ಕಠಿಣಚಿತ್ತಮುಳ್ಳವನಾದ ಚಾಣಕ್ಯನಂ ಕಂಡರೆ ನಿರಪರಾಧಿಯಾದರೂ ಭೀತನಾಗುವನು. ನಾನಾದರೋ ಮಹಾಪರಾಧಿಯು. ಅವನಂ ಕಂಡ ಬಳಿಕ ನನಗೇನು ವಿಪತು ಬರುವುದೋ ! ಒಳ್ಳೆಯದು. ರ್ಯಾಗ್ಧಮಾಗಿ ಬಂದರೂ ಬರಲಿ. ರಾಕ್ಷಸನ ಗೃಹಜನಮಾತ್ರ ಸಿಕ್ಕದಂತೆ ಮಾಡಿದರೆ ಅದೇ ನನಗೆ ಪರಮ ಲಾಭವೆಂದು ನಿಶ್ಚಯಿಸಿ ಚಾಣಕ್ಯಶಿಷ್ಯನಂ ಕುರಿತು—

ಅಯ್ಯಾ ವಿಪ್ರೋತ್ತಮನೆ, ನಾನು ಧರಿಸಿರುವ ವಸ್ತ್ರಗಳು ಮಲಿನವಾಗಿವೆ. ದೊಡ್ಡವರಂ ಕಾಣುವುದಕ್ಕೆ ಬೇರೆ ಧೌತಾಂಬರಗಳನ್ನುಟ್ಟುಕೊಂಡು ಬರುವೆನು. ನೀನು ಆವರೆಗೂ ಈ ಪೀಠದ ಮೇಲೆ ಕುಳಿತಿರಬಹುದು ಎಂದು ಹೇಳಿ ತಾನು ಒಳಗೆ ಹೋಗಿ ತನಗೆ ಆಪ್ತನಾದ ಧನಸೇನನಂ ಕರೆದು—ಎಲೈ, ಕ್ರೂರನಾದ ಚಾಣಕ್ಯನು ನನ್ನಂ ಕರೆಯ ಕಳುಹಿಸಿದ್ದಾನೆ. ಅವನ ಬಳಿಗೆ ಹೋದ ಬಳಿಕ ಏನಾಗುವುದೋ ತಿಳಿಯಕೂಡದು. ನೀನು ಅಮಾತ್ಯರ ಕುಟುಂಬದವರನ್ನು ಮತ್ತೊಂದು ರಹಸ್ಯಸ್ಥಾನದಲ್ಲಿ ಇರಿಸಿ ಕಾದುಕೊಂಡಿರು ಎಂದು ನೇಮಿಸಿ, ತಾನು ಮಡಿಬಟ್ಟೆಗಳಂ ಹೊದೆದುಕೊಂಡು ಹೊರಟು ಬಂದು ಚಾಣಕ್ಯನಂ ಕಂಡು ಕೈಮುಗಿಯಲು

ಎಲೈ ಚಂದನದಾಸನೇ, ನೀನು ಕ್ಷೇಮದಲ್ಲಿ ಇದ್ದೀಯಾ ? ಮಾಡುವ ವ್ಯಾಪಾರಗಳು ನಿರುಪಾಧಿಕಗಳಾಗಿ ನಡೆಯುತ್ತಿವೆಯೇ ? ಕುಳ್ಳಿರು ಎಂದು ಚಾಣಕ್ಯನು ನುಡಿಯಲು ಆ ಮಾತಿಗೆ ಚಂದನದಾಸನು—

ಸ್ವಾಮಿಾ, ತಮ್ಮ ಕೃಪೆಯಿಂದ ಎಲ್ಲವೂ ನಿಷ್ಕಂಟಕಮೆಂದು ಹೇಳಿ ನಮಸ್ಕರಿಸಿ ಕುಳಿತುಕೊಂಡನು.

ಬಳಿಕ ಚಾಣಕ್ಯನು—ಎಲೈ ಚಂದನದಾಸನೇ, ಪ್ರಜೆಗಳು ಚಂದ್ರಗುಪ್ತನಂ ಒಳ್ಳೆಯವನೆಂದು ಹೇಳುತ್ತಾರೆಯೋ ನಂದರನ್ನೇ ಉತ್ತಮರೆಂದು ಹೊಗಳಿಕೊಳ್ಳುತ್ತಾರೋ ? ಎನಲು—

ಸ್ವಾಮಿಾ, ಶರತ್ಕಾಲದ ಚಂದ್ರನಂ ಕಂಡ ನೈದಿಲೆಗಳಂತೆ ಪ್ರಜೆಗಳು ಚಂದ್ರಗುಪ್ತಮಹಾರಾಜರನ್ನೇ ಅಪೇಕ್ಷಿಸುತ್ತಿದ್ದಾರೆ ಎಂದನು.

ಚಾಣಕ್ಯನು—ಎಲೈ ಚಂದನದಾಸನೇ, ಸಂತುಷ್ಟರಾದ ಪ್ರಜೆಗಳ

ದೆಸೆಯಿಂದ ಅರಸುಗಳು ಪ್ರತ್ಯುಪಕಾರವನ್ನಪೇಕ್ಷಿಸುವುದು ಪೂರ್ವಮರ್ಯಾದೆ ಎನಲು

ಚಂದನದಾಸನು ಸ್ವಾಮಿಯವರ ಅಪ್ಪಣೆಯಾದಂತೆ ಸರ್ವರೂ ತಮ್ಮ ಶಕ್ತಿಯಂ ಮೀರಿ ನಡೆದುಕೊಂಡಾರು ಎಂದನು. ಅದಕ್ಕೆ ಚಾಣಕ್ಯನು—

ಎಲೈ ಚಂದನದಾಸನೇ, ನಿರಪರಾಧಿಗಳಾದ ರಾಷ್ಟ್ರವಾಸಿಗಳ ದೆಸೆಯಿಂದ ದಂಡಮಂ ತೆಗೆಯುವುದಕ್ಕೆ ಇದು ನಂದರ ಪ್ರಭುತ್ವಮಲ್ಲ. ನೀವೆಲ್ಲರೂ ಕ್ಷೇಮಿಗಳಾಗಿದ್ದರೆ ಅದೇ ಚಂದ್ರಗುಪ್ತನಿಗೆ ಮಹಾಭ್ಯುದಯವು ಎನಲು

ಚಂದನದಾಸನು—ಸ್ವಾಮಿ, ಅದೇ ಮೇರೆಗೆ ನಮ್ಮೆಲ್ಲರಂ ರಕ್ಷಿಸಬೇಕು ಎಂದನು.

ಎಲೈ ಚಂದನದಾಸನೇ, ದೊರೆಗಳಿಗೆ ಅಪ್ರಿಯಮಂ ಮಾಡದಿದ್ದರೆ ಸಂರಕ್ಷಿತರಾಗಿದ್ದೀರಿ ಎಂದು ಚಾಣಕ್ಯನು ಹೇಳಿದುದಕ್ಕೆ ಚಂದನದಾಸನು—

ಸ್ವಾಮಿ, ದುರಾತ್ಮಕನಾದವನು ಜನೇಶ್ವರರಿಗೆ ಅಪ್ರಿಯವನ್ನು ಎಣಿಸುವನು ಎನಲಾಗಿ ಚಾಣಕ್ಯನು—

ಎಲೈ ಚಂದನದಾಸನೇ, ಮೊದಲು ನೀನೇ ರಾಜದ್ರೋಹಿಯಾಗಿದ್ದೀ ಎಂದನು. ಅದಂ ಕೇಳಿ ಚಂದನದಾಸನು—

ಬುದ್ಧೇಶ! ಬುದ್ಧೇಶ! ಎಂದು ತನ್ನ ದೇವರಂ ನೆನೆಯುತ್ತ—ಸ್ವಾಮಿ, ಅಗ್ನಿಯೊಡನೆ ತೃಣಂಗಳಿಗೆ ಕಲಹಮುಂಟೇ ? ಎನಲು ಚಾಣಕ್ಯನು—

ಎಲೈ ವರ್ತಕನೇ, ರಾಜಾಪರಾಧಿಯಾದ ರಾಕ್ಷಸನ ಗೃಹಜನಮಂ ನಿನ್ನ ಮನೆಯಲ್ಲಿ ಮರೆಮಾಡಿ ಇರಿಸಿಕೊಂಡು ಈಗಿನವರೆಗೂ ಪ್ರಭುವಿಗೆ ವಿಜ್ಞಾಪಿಸದೆ ಇರುವುದು ನಿನ್ನಲ್ಲಿ ಅಪರಾಧವೋ ಅಲ್ಲವೋ ? ಎಂದನು.

ಚಂದನದಾಸನು—ಬುದ್ಧೀ, ಯಾರೋ ಅನೃತಮಂ ಹೇಳಿರಬೇಕು. ಈ ಅರ್ಥಮಂ ನಾನು ಕಂಡವನಲ್ಲ ಎಂದನು. ಚಾಣಕ್ಯನು—

ಈ ಸಂಗತಿಯಂ ನೀನು ಕಂಡಿರುವುದುಂಟಾದರೆ ನಿನ್ನ ಸರ್ವಸ್ವವನ್ನೂ ಅರಮನೆಗೆ ತೆಗೆದುಕೊಂಡು ನಿನಗೆ ತೀಕ್ಷ್ಣವಾದ ದಂಡನೆಯಂ ಮಾಡಬಹುದೇ ? ಎನಲು ಚಂದನದಾಸನು—

ರಾಕ್ಷಸನು ಹೋಗುವ ಸಮಯದಲ್ಲಿ ತನ್ನ ಮನೆಯ ಜನರಂ ನನ್ನ ಮನೆಯಲ್ಲಿರಿಸಿದ್ದುದುಂಟು. ಆ ಬಳಿಕ ಅವರು ನನ್ನಂ ವಂಚಿಸಿ ಎಲ್ಲಿಯೋ ಹೋದುದರಿಂದ ವಿಜ್ಞಾಪಿಸುವುದಕ್ಕೆ ಭಯಪಡುತ್ತಿದ್ದೆನು ಎಂದನು. ಅದಕ್ಕೆ ಚಾಣಕ್ಯನು—

ಎಲೈ ಸೆಟ್ಟಿಯೇ, ಮೊದಲು ಕಾಣೆನೆಂದು ಹೇಳಿ ಈಗ ಕಂಡುದುಂಟು. ಎಲ್ಲಿಯೋ ಹೋದರು ಎಂದು ಎರಡು ಮಾತುಗಳಂ ಹೇಳಬಹುದೇ? ಎನಲು ಚಂದನದಾಸನು—

ಬುದ್ಧೀ, ಭಯದಿಂದ ಬಾಯಿತಪ್ಪಿ ಹಾಗೆ ಹೇಳಿದೆನು ಎಂದನು.

ಚಾಣಕ್ಯನು ನಕ್ಕು— ಎಲೈ ವ್ಯಾಪಾರಿಯೇ, ಚಂದ್ರಗುಪ್ತನ ಪ್ರಭುತ್ವದಲ್ಲಿ ಬಾಯಿತಪ್ಪು ಬರಕೂಡದು. ಸುಮ್ಮನೆ ರಾಕ್ಷಸನ ದಾರಾ-ಪುತ್ರಾದಿಗಳಂ ತಂದು ಒಪ್ಪಿಸು ಎಂದನು.

ಆ ಮಾತಿಗೆ ಚಂದನದಾಸನು ತನ್ನ ಮನಸ್ಸಿನಲ್ಲಿ—ಈಗ ಶಿರಸ್ಸಿನ ಮೇಲೆ ಸರ್ಪಬಾಧೆಯೂ ಪರ್ವತಪ್ರಾಂತ್ಯದಲ್ಲಿ ವಿಷಹರವಾದ ಔಷಧವೂ ಇದ್ದಂತಾಯಿತು. ಏನೋ ಮಹದಾಪತ್ತು ಬಂದಿತು ಎಂದು ಚಿಂತಿಸುತ್ತಿರು ವಷ್ಟರಲ್ಲಿ ಹೊರಗೆ ಆಗುವ ಕಲಕಲಧ್ವನಿಯಂ ಕೇಳ್ದು ಚಾಣಕ್ಯನು— ಅದೇನು? ತಿಳಿದುಬಾರೆಂದು ಶಿಷ್ಯನಿಗೆ ನೇಮಿಸಲು ಆ ಶಿಷ್ಯನು ಹೋಗಿ ಬಂದು—

ಸ್ವಾಮಿಾ ಉಪಾಧ್ಯಾಯರೇ, ವಿಷಕನ್ಯಾಮುಖದಿಂದ ಪರ್ವತರಾಜನಂ ಸಂಹರಿಸಿದ ದೋಷವನ್ನುದ್ಘಾಟಿಸುತ್ತ ದೂತರು ಜೀವಿಸಿದ್ಧಿ ಎಂಬ ಕ್ಷಪಣಕನಂ ಚಂದ್ರಗುಪ್ತನ ಅಪ್ಪಣೆಯ ಪ್ರಕಾರ ಅಪಮಾನಪೂರ್ವಕಮಾಗಿ ಊರದೆಸೆಯಿಂದ ಹೊರಡಿಸುತ್ತಿದ್ದಾರೆ ಎನಲು ತಾನು ಮಾಡಿದುದಕ್ಕೆ ತಕ್ಕು ದಾದ ಫಲವನ್ನನುಭವಿಸಲಿ ಎಂದು ಚಾಣಕ್ಯನು ಹೇಳುತ್ತ—

ಎಲೈ ಚಂದನದಾಸನೇ, ರಾಜಾಪರಾಧಿಗಳಿಗೆ ಈ ರೀತಿಯಾಗುವುದು ಸ್ವಭಾವವು. ಆದುದರಿಂದ ವಂಚಿಸದೆ ರಾಕ್ಷಸನ ಗೃಹಜನವನ್ನು ಕರತಂದು ಒಪ್ಪಿಸುವವನಾಗು ಎನಲು—

ಚಂದನದಾಸನು—ಸ್ವಾಮಿಾ, ನಾನು ಅರಿತವನಲ್ಲ ಎಂದನು.

ಅಷ್ಟರಲ್ಲಿಯೇ ಪುನಃ ಬೀದಿಯಲ್ಲಿ ಕೋಲಾಹಲರವಂ ಕೇಳಿಬರುತ್ತಿರಲು—ಅದೇನು ? ನೋಡು ಎನ್ನುತ್ತ ಚಾಣಕ್ಯನು ಶಿಷ್ಯನಿಗೆ ಅಜ್ಞಾಪಿಸಿಲು ಅವನು ಹೋಗಿ ನೋಡಿ ಬಂದು—

ಉಪಾಧ್ಯಾಯರೇ, ಭಟರು ರಾಜದ್ರೋಹಿಯಾದ ಶಕಟದಾಸನನ್ನು ಅರಸಿನ ಅಪ್ಪಣೆಯ ಮೇರೆಗೆ ಶೂಲಕ್ಕೆ ಹಾಕುವುದಕ್ಕೆ ಸಾರಿಕೊಂಡು ಕರೆದೊಯ್ಯುತ್ತಿದ್ದಾರೆ ಎನಲು ಅವನು ಮಾಡಿದ ದ್ರೋಹಕ್ಕೆ ಅನುಗುಣವಾದ ಫಲವನ್ನನುಭವಿಸಲಿ ಎಂದು ಹೇಳುತ್ತ ಚಾಣಕ್ಯನು ಚಂದನದಾಸನಂ ಕುರಿತು—

ಎಲೈ ಸೆಟ್ಟಿಯೇ, ರಾಜಾಪರಾಧಿಗಳಿಗೆ ಹೀಗೆ ಕಠಿಣದಂಡನೆಯಾಗುತ್ತಿರುವುದಂ ಕಂಡೂ ಇನ್ನೂ ಅರಿಯೆನೆಂದು ಹೇಳುತ್ತೀಯೇ ? ನಿನ ಹೆಂಗಸರುಮಕ್ಕಳಿಗೆ ಕ್ಷೇಮವಾಗಬೇಕಾದರೆ ರಾಕ್ಷಸನ ಮನೆಯವರಂ ತಂದು ಒಪ್ಪಿಸು ಎನಲು ಚಂದನದಾಸನು—

ಸ್ವಾಮಿಾ, ಸುಮ್ಮನೇ ನನ್ನಂ ಬೆದರಿಸುವಿರಿ. ಅಮಾತ್ಯನ ಕುಟುಂಬದವರಂ ಇದ್ದರೂ ನಾನು ಕೊಡುವವನಲ್ಲ. ಇಲ್ಲದಿರುವವರಂ ಹೇಗೆ ಒಪ್ಪಿಸಲಿ ? ಎಂದನು. ಅದಕ್ಕೆ ಚಾಣಕ್ಯನು—

ಎಲೈ ಸೆಟ್ಟಿಯೇ, ನಿನ್ನ ನಿಶ್ಚಯವು ಇದೇ ಸರಿಯೋ ? ಎನಲಾಗಿ—

ಚಂದನದಾಸನು—ಸ್ವಾಮಿಾ, ಹೀಗೇ ಸರಿ ಎನಲು, ಚಾಣಕ್ಯನು ತನ್ನ ಹೃದಯದಲ್ಲಿ—ಈ ಸೆಟ್ಟಿಯು ಸತ್ಯವಂತನು. ಮಿತ್ರಕಾರ್ಯಕ್ಕೋಸ್ಕರವಾಗಿ ತನ್ನ ಪ್ರಾಣವನ್ನಾದರೂ ಒಪ್ಪಿಸತಕ್ಕವನು ಎಂದು ನಿಶ್ಚಯಿಸಿ ಆ ಮೇಲೆ ಕೋಪಿಸಿಕೊಂಡವನಂತೆ ಹುಬ್ಬುಗಂಟಿಕ್ಕಿ—ಎಲೈ ದುರಾತ್ಮಕನಾದ ವರ್ತಕನೇ, ಹಾಗಾದರೆ ನೀನು ಮಾಡಿದ ದ್ರೋಹಕ್ಕೆ ಸರಿಯಾದ ಫಲವನ್ನನುಭವಿಸೀಯೇ ಎನಲು ಚಂದನದಾಸನು—

ಸ್ವಾಮಿಾ, ನಿಮ್ಮ ಸ್ವಾತಂತ್ರ್ಯಾನುಗುಣವಾಗಿ. ಮಾಡುವುದಂ ಮಾಡಿರಿ. ನಾನು ಸಿದ್ಧನಾಗಿದ್ದೇನೆ ಎಂದನು.

ಆಗ ಚಾಣಕ್ಯನು ಶಿಷ್ಯನಂ ಕರೆದು—ಎಲೈ ಶೀಘ್ರಕಾರಿಯೇ, ಈ ದುಷ್ಟವಣಿಜನ ಮನೆಯ ಪದಾರ್ಥವೆಲ್ಲವಂ ರಾಜಕೋಶಕ್ಕೆ ತೆಗೆದುಕೊಂಡು

Funding: Tattva Heritage Foundation,Kolkata. Digitization: eGangotri.



ಸ್ವಜನ ಸಮೇತವಾಗಿ ಇವನಂ ಕಾವಲಿನಲ್ಲಿ ಇರಿಸುವಂತೆ ದುರ್ಗಪಾಲಕನಿಗೆ ಹೇಳು. ನಾನು ಚಂದ್ರಗುಪ್ತನಿಗೆ ತಿಳಿಸಿ ಇವನಿಗೆ ಕರ್ಕಶದಂಡನೆಯಂ ಮಾಡಿಸುವೆನೆಂದು ನುಡಿದು ಚಂದನದಾಸನಂ ಕಳುಹಿಸಿ ತನ್ನ ಅಂತರಂಗ ದಲ್ಲಿ ಈ ಚಂದನದಾಸನು ಸುಹೃದನಾದ ರಾಕ್ಷಸನ ನಿಮಿತ್ತವಾಗಿ ತನ್ನ ಸುವ ನ್ನಾದರೂ ಕೊಟ್ಟು ಆತನ ಪತ್ನೀಪುತ್ರರಂ ರಕ್ಷಿಸುವೆನೆಂದು ಹೇಗೆ ನಿಶ್ಚಯಿಸಿ ಇರುವನೋ ಹಾಗೆಯೇ ರಾಕ್ಷಸನೂ ತನ್ನ ನಿಮಿತ್ತವಾಗಿ ಚಂದನದಾಸನಿಗೆ ಬಂದ ವಿಪತ್ತಂ ಪರಿಹರಿಸಲೋಸುಗ ಸ್ವಂತ ಪ್ರಾಣವನ್ನಾದರೂ ಇತ್ತು ಈ ಚಂದನದಾಸನಂ ಬಿಡಿಸುವೆನೆಂದು ಎಳೆಗಂದಿ ಕರುವಿದ್ದೆಡೆಗೆ ಬರುವಂತೆ ತಾನು ಇಲ್ಲಿಗೆ ಬಂದಾನು. ಶಕಟದಾಸನಂ ಶೂಲಸ್ಥಾನಕ್ಕೆ ಕಳುಹಿಸಿ ದಂತೆ ಸಮಯವನ್ನರಿತು ಈ ಸೆಟ್ಟಿಯಂ ಅದೇ ಸ್ಥಾನಕ್ಕೆ ಕಳುಹಿಸಬೇಕೆಂದು ನಿಶ್ಚಯಿಸುತ್ತಿರಲು, ಮೊದಲು ಚಾಣಕ್ಯರು ತನ್ನ ಕಿವಿಯಲ್ಲಿ ಉಸುರಿದ ರೀತಿಗೆ ವಧ್ಯಸ್ಥಾನಕ್ಕೆ ಚಂಡಾಲರು ಕರತರುವುದಕ್ಕೆ ಮುಂಚಿತವಾಗಿಯೇ ಸಿದ್ಧಾರ್ಥಕನು ಖಡ್ಗಪಾಣಿಯಾಗಿ ಮರೆಯಲ್ಲಿ ನಿಂತು ಆ ಶಕಟದಾಸನಂ ಶೂಲಸ್ಥಳಕ್ಕೆ ಕರತಂದು ನಿಲ್ಲಿಸುವುದಂ ನೋಡಿ ಕತ್ತಿಯಂ ಝಳಪಿಸುತ್ತ ಆ ಘಾತುಕರಂ ಅಟ್ಟಿ ಬಂದು ಮೇಲೆ ಬಿದ್ದು ಛೇದಿಸುವವನಂತೆ ಮೊರೆಯುತ್ತ ಕಣ್ಣುಸನ್ನೆಯಂ ಮಾಡಲು ಆ ಕಡಿಗರು ಅವನ ರಭಸಕ್ಕೆ ಭೀತರಾದವರಂತೆ ಶಕಟದಾಸನಂ ಬಿಟ್ಟು ದಿಕ್ಕುದಿಕ್ಕಿಗೆ ಓಡಿ ಹೋದರು. ಆಗ ಸಿದ್ಧಾರ್ಥಕನು ಚಾಣಕ್ಯಚಂದ್ರಗುಪ್ತರಂ ನಿಂದಿಸುತ್ತ—

ಎಲೈ ಶಕಟದಾಸನೇ, ಭಯಪಡಬೇಡ. ಈ ಸ್ಥಳಮಂ ಬಿಟ್ಟು ಎಲ್ಲಿ ಯಾದರೂ ಹೋಗೋಣ ನಡೆ ಎಂದು ಅವನಂ ಕರದುಕೊಂಡು ಪರ್ವತ ರಾಜ್ಯಾಭಿಮುಖವಾಗಿ ಹೋಗುತ್ತಿದ್ದನು. ಆಗ ಚಾಣಕ್ಯನ ಶಿಷ್ಯನು ಈ ವರ್ತಮಾನಮಂ ತಿಳಿದು ಬಂದು—

ಸ್ವಾಮಿ ಉಪಾಧ್ಯಾಯರೇ, ಶಕಟದಾಸನಂ ಶೂಲಾರೋಹಣವಂ ಮಾಡಿಸುವ ಸಮಯದಲ್ಲಿ ಸಿದ್ಧಾರ್ಥಕನೆಂಬುವನು ಖಡ್ಗಪಾಣಿಯಾಗಿ ಬಂದು ಚಂಡಾಲರಂ ಬೆದರಿಸಿ ಓಡಿಸಿ ಶಕಟದಾಸನಂ ಕರೆದುಕೊಂಡು ಎಲ್ಲಿಯೋ ಪಲಾಯನಂಗೆಯ್ದನಂತೆ ಎನಲು ಅದಂ ಕೇಳಿ ಚಾಣಕ್ಯನು ತನ್ನ ಚಿತ್ತದಲ್ಲಿ—ಶಕಟದಾಸ ಸಮೇತನಾಗಿ ಸಿದ್ಧಾರ್ಥಕನು ಹೋದುದು ಉತ್ತಮ

ವಾಯಿತು. ಇಲ್ಲಿದ್ದ ಸೇನಾಪತಿಗಳಂ ಹೊರಡಿಸಿ ಕಳುಹಿಸಿದುದಕ್ಕೆ ಪುರ ಜನರು ಏನೆಂದು ಹೇಳಿಕೊಳ್ಳುವರೋ ಅದಂ ತಿಳಿಯಬೇಕೆಂದು ನೆನಸಿ ಶಿಷ್ಯನಂ ಕುರಿತು—

ಎಲೈ ಭಾಗಪುಚ್ಛನೆಂಬ ವಟುಕನೇ, ಶಕಟದಾಸನೂ ಸಿದ್ಧಾರ್ಥಕನೂ ಎಲ್ಲಿ ಹೋಗಿರುವರೋ ಅವರಂ ಹಿಡಿದು ತರುವಂತೆ ಬಾಗುರಾಯಣನಿಗೆ ಹೇಳಿ ಬಾರೆಂದೆನಲು ಅವನು ಹೋಗಿ ತಿಳಿದು ಬಂದು—

ಉಪಾಧ್ಯಾಯರೇ, ಬಾಗುರಾಯಣನು ಅಂದೇ ಹೊರಟು ಹೋದ ನಂತೆ ಎನಲು—

ಆ ವಂಚಕನಾದ ಬಾಗುರಾಯಣನು ಎಲ್ಲಿ ಹೋಗಿದ್ದಾನೋ ಹಿಡಿದು ತರುವುದು ಎಂದು ಭದ್ರಭಟಾದಿಸೇನಾನಾಯಕರಿಗೆ ಉಸುರಿ ಬಾರೆಂದೆನಲು ಶಿಷ್ಯನು ಹೋಗಿ ವಿಚಾರಿಸಿ ಬಂದು—

ಓಹೋ! ಉಪಾಧ್ಯಾಯರೇ, ಮೊದಲು ನೀವು ಆ ಸ್ಥಾನದಲ್ಲಿ ಕುಳಿತು ಕೋಪಮಂ ಮಾಡಿದುದರಿಂದ ಭದ್ರಭಟಾದಿಚಮೂಪತಿಗಳು ನಿಮ್ಮ ಮೇಲೆ ರಾಜಕಾರ್ಯಮಂ ಮಾಡುವುದಕ್ಕಾಗಿ ಬಲಸಮೇತರಾಗಿ ಇಲ್ಲಿಂದ ಹೋಗಿ ಪರರಾಜರಂ ಕಟ್ಟಿಕೊಂಡು ದಂಡೆತ್ತಿ ಬರುವವರಾಗಿದ್ದಾರಂತೆ. ಕೆಲಸವೆಲ್ಲ ಕೆಟ್ಟುಹೋಯಿತು. ಈ ಅರ್ಥಮಂ ಜನರು ಆಡಲಂಜಿ ಗುಸುಗುಟ್ಟುತ್ತ ಇದ್ದಾರೆ. ತಾವು ಮಹಾಚತುರರಾದುದರಿಂದ ಆ ಶತ್ರುಗಳ ಸೈನ್ಯಕ್ಕೆ ಸಿಕ್ಕದೆ ತಪ್ಪಿಸಿಕೊಂಡೀರಿ. ಅನಾಥರಾಗಿರುವ ನಮ್ಮಂ ಹಿಡಿದು ನಿಮ್ಮ ಗುರುಗಳೆಲ್ಲಿ! ಎಂದು ನಿರ್ಬಂಧಪಡಿಸಿದರೆ ಬ್ರಾಹ್ಮಣರು ಅನೃತಮಂ ಹೇಳಬಾರದಷ್ಟೆ. ನೀವು ಹೋಗತಕ್ಕ ಸ್ಥಳಮಂ ಈಗಲೇ ತಿಳಿಸಿದ್ದರೆ ಒಳ್ಳೆಯದು ಎನಲು ಆ ಮಾತಿಗೆ ಚಾಣಕ್ಯನು ನಸುನಗುತ್ತ—

ಎಲೈ ವಟುವೇ, ದಸ್ಯುಗಳಿಗೆ ನಮ್ಮಂ ತೋರಿಸುವೆಯಾ? ಆದರೆ ನಾವು ರಾಮೇಶ್ವರಕ್ಕೆ ಹೋಗಿ ಅಲ್ಲಿರುವೆವು ಎಂದನು.

ಸ್ವಾಮಿ, ರಾಮೇಶ್ವರವು ಎಲ್ಲಿ ಇರುವುದು? ಎನಲು—

ಎಲೈ ವಟುವೇ, ರಾಮೇಶ್ವರವು ರಾಮಸೇತುವಿದ್ದಲ್ಲಿ ಇರುವುದು ಎಂದನು. ಆ ಮಾತಿಗೆ ಶಿಷ್ಯನು—

ಸ್ವಾಮಿಾ, ರಾಮದೇವರು ತನ್ನ ಪಟ್ಟಣದ ಸರಯೂನದಿಯಲ್ಲಿ ಸೇತುವಂ ರಚಿಸಿರುವನೋ ? ಇಲ್ಲವೇ ಯಮುನಾನದಿಯಲ್ಲಿ ರಚಿಸಿರುವನೋ ? ಎನಲು ಚಾಣಕ್ಯನು—

ಎಲೈ ಬ್ರಹ್ಮಚಾರಿಯೇ, ಲವಣಸಮುದ್ರಕ್ಕೆ ಎಂದನು.

ಸ್ವಾಮಿಾ, ಲವಣಖಂಡವೇ ಸಮುದ್ರವಾದರೆ ಸಂಚರಿಸುವ ಜನರ ಪಾದಗಳಿಗೆ ಕ್ಷಾರ ತಗುಲದೇ ಇರುವುದಕ್ಕಾಗಿ ಸೇತುಬಂಧವೋ ? ಎನಲು ಅದಂ ಕೇಳಿ ಶಾರ್ಙ್ಗರವನು—

ಎಲೈ ವಟುವೇ, ಏನು ಅಸಂಬದ್ಧವಾಗಿ ಕೇಳುತ್ತಿರುವೆ ? ಶತ್ರುಬಾಧೆಯುಂಟಾದರೆ ಮೊದಲೇ ನಿನ್ನಂ ದಾಟಿಸುವೆವು. ಭಯಪಡಬೇಡ. ಹೋಗು. ಕಂದಮೂಲಂಗಳಂ ತೊಳೆದು ಸಿದ್ಧಮಾಡು. ಮೊದಲು ಹೋದವರೆಲ್ಲ ಹೋದರು. ಮುಂದೆ ಹೋಗಬೇಕೆಂಬವರೆಲ್ಲ ಈ ಪುರಮಂ ಬಿಟ್ಟು ಹೋಗಲಿ. ನಮ್ಮ ಗುರುಗಳ ಕಾರ್ಯೋತ್ಸವಂ ತಗ್ಗದೆ ಇದ್ದರೆ ಸಕಲವೂ ಸಾಧ್ಯಮಾಗುವುದು ಎಂದು ಹೇಳಿ, ಭಾಗಪುಚ್ಛನಂ ಆಚೆಗೆ ಕಳುಹಿಸುತ್ತಿದ್ದನೆಂಬಲ್ಲಿಗೆ ಮುದ್ರಾಮಂಜೂಷಮೆಂಬ ಗ್ರಂಥದಲ್ಲಿ ರಾಕ್ಷಸಮುದ್ರಿಕಾಗ್ರಹಣಮೆಂಬ ತ್ರಯೋದಶಾಶಯವು ಸಮಾಪ್ತಮಾದುದು.

---

# ಏಕಾಂಕ ಭಾಗ

## ೧. ವೀರ ಪುಲಕೇಶಿ

( ಐತಿಹಾಸಿಕ ಏಕಾಂಕಿಕೆ )

ಬರೆದವರು : ಶ್ರೀ. ಬೇಂದ್ರೆ ಲಕ್ಷ್ಮಣರಾಯರು

### ಪರಿಚಯ

ಇದೊಂದು ಐತಿಹಾಸಿಕ ಘಟನೆಯನ್ನು ಒಳಗೊಂಡ ಏಕಾಂಕಿಕೆ. ಚಲುಕ್ಯ ರಾಜವಂಶದ ಪುಲಕೇಶಿ ಚಿಕ್ಕವನಿರುವಾಗಲೇ ಆತನ ತಂದೆ ದಿವಂಗತನಾದುದರಿಂದ, ಚಲುಕ್ಯ ಸಾಮ್ರಾಜ್ಯದ ಸೂತ್ರಗಳು, ತಾತ್ಪೂರ್ತಿಕವಾಗಿ ಪುಲಕೇಶಿಯು ಕಕ್ಕ ಮಂಗಲೇಶನ ಕಡೆಗೆ ಬಂದಿರುವುವು. ಪುಲಕೇಶಿ ಪ್ರಬುದ್ಧನಾಗಿ ತನ್ನ ಅಧಿಕಾ ಸೂತ್ರಗಳನ್ನು ಕೇಳುತ್ತಲಿದ್ದರೂ, ವಂಚಕನೂ ರಾಜ್ಯಲೋಭಿಯೂ ಆದ ಮಂಗಲೇಶ ಇಂದು—ನಾಳೆ—ಎಂದು ದಿನ ನೂಕುತ್ತಲಿರುವನು, ಪುಲಕೇಶಿ ಕಕ್ಕನ ಮನಸ್ಸನ್ನು ಪೂರ್ತಿಯಾಗಿ ಪರೀಕ್ಷೆಮಾಡಿ, ತಾನೂ ಕುಟಿಲರಾಜತಂತ್ರವನ್ನು ಬಳಸಿ, ಮಂಗಲೇಶ ನನ್ನು ಯುದ್ಧದಲ್ಲಿ ಸೋಲಿಸಿ ತನ್ನ ಸಾಮ್ರಾಜ್ಯಾಧಿಕಾರವನ್ನು ಪಡೆಯುತ್ತಾನೆ. ಇಷ್ಟು ಇದರ ಕಥಾವಸ್ತು.

ಇದನ್ನು ಬರೆದ ಶ್ರೀ. ಬೇಂದ್ರೆ ಲಕ್ಷ್ಮಣರಾಯರು ಧಾರವಾಡದವರು. ಒಳ್ಳೆಯ ನಾಟಕಕಾರರೆಂದೂ ಕತೆಗಾರರೆಂದೂ ಹೆಸರುಪಡೆದಿದ್ದಾರೆ. ಇವರು ಬರೆದ 'ಭಾಗ್ಯಶ್ರೀ' 'ಪರಿವರ್ತನ' ಎಂಬ ಸ್ವತಂತ್ರನಾಟಕಗಳು ರಂಗಭೂಮಿಯ ಮೇಲೆ ಬಂದು ಜನಪ್ರೀತಿ ಯನ್ನು ಪಡೆದಿವೆ. ಹಲವಾರು ತರಂಗರೂಪಕಗಳನ್ನೂ ಬರೆದಿದ್ದಾರೆ. ಪರಭಾಷೆಯಿಂದ ಅನುವಾದಿತವಾದ ಇವರ 'ಜೂಜು' 'ಬಾಯಿಬಂಡಾಯ' ಎಂಬ ನಾಟಕಗಳು ವಿಮರ್ಶಕರ ಮನ್ನಣೆಗೆ ಪಾತ್ರವಾಗಿವೆ. ಇವರು ಬರೆದ ಸಣ್ಣಕತೆಗಳ ಎರಡು ಸಂಕಲನಗಳೂ ಪ್ರಕಟವಾಗಿವೆ.

### ಪಾತ್ರವಿವರಣೆ

ಪುಲಕೇಶಿ (ಚಲುಕ್ಯಸಾಮ್ರಾಜ್ಯದ ಯುವರಾಜ)
ಮಂಗಲೇಶ (ಪುಲಕೇಶಿಯ ಚಿಕ್ಕಪ್ಪ)
ವಿಷ್ಣುವರ್ಮ (ಮಂಗಲೇಶನ ದಂಡನಾಯಕ)
ರವಿಕೀರ್ತಿ (ಪುಲಕೇಶಿಯ ಕೈವಾರಿ)
ವಿಜಯಾ (ಮಂಗಲೇಶನ ಪತ್ನಿ)
ಮಂಗಲೇಶನ ಸೇವಕನೊಬ್ಬ

## ದೃಶ್ಯ ೧

[ಪುಲಕೇಶಿಯ ಚಿಕ್ಕಪ್ಪನೂ, ರಾಜ್ಯಪಾಲನೂ ಆದ ಮಂಗಲೇಶನ ಅರಮನೆಯಲ್ಲಿಯ ದೇವಮಂದಿರ. ಮಂಗಲೇಶನು ತನ್ನ ಆರಾಧ್ಯದೇವತೆಯಾದ ವಿಷ್ಣುವಿಗ್ರಹದೆದುರು ಸ್ತೋತ್ರ ಪಠಿಸುತ್ತ ಕುಳಿತಿದ್ದಾನೆ. ಆಗ ಅವನ ಹೆಂಡತಿಯಾದ ವಿಜಯಾದೇವಿ ಬರುತ್ತಾಳೆ; ಅವನ ಸ್ತುತಿಪಾಠದಲ್ಲಿ ದನಿಗೂಡಿಸುತ್ತಾಳೆ.]

ನಮಾಮಿ ನಾರಾಯಣ ಪಾದಪಂಕಜಮ್ ।
ಕರೋಮಿ ನಾರಾಯಣ ಪೂಜನಂ ಸದಾ ।
ವದಾಮಿ ನಾರಾಯಣ ನಾಮನಿರ್ಮಲಮ್ ।
ಸ್ಮರಾಮಿ ನಾರಾಯಣ ತತ್ತ್ವಮವ್ಯಯಮ್ ॥
ಶ್ರೀವಲ್ಲಭೇತಿ ವರದೇತಿ ದಯಾಪರೇತಿ ।
ಭಕ್ತಪ್ರಿಯೇತಿ ಭವಲುಂಠನ ಕೋವಿದೇತಿ ।
ನಾಥೇತಿ ನಾಗಶಯನೇತಿ ಜಗನ್ನಿವಾಸೇ- ।
ತ್ಯಾಲಾಪಿನಂ ಪ್ರತಿದಿನಂ ಕುರು ಮಾಂ ಮುಕುಂದ ॥

**ಮಂಗಲೇಶ**— (ಸ್ತುತಿ ಮುಗಿದನಂತರ) ವಿಜಯಾ, ನಿನ್ನ ದೇವಿಯ ಪೂಜೆ ಮುಗಿಯಿತೆ?

**ವಿಜಯಾ**— (ಆನಂದೋತ್ಸಾಹದಲ್ಲಿ) ಮುಗಿಯಿತು ಸ್ವಾಮಿ. ದೇವಿ ಅನುಗ್ರಹಿಸಿದಳು. ಅದನ್ನರುಹುವುದಕ್ಕಾಗಿಯೆ ಧಾವಿಸುತ್ತ ಬಂದೆ.

**ಮಂಗಲೇಶ**— ಆದರೆ ನನ್ನ ದೇವರು ನನ್ನ ಮೇಲೆ ಅನುಗ್ರಹಿಸಲಿಲ್ಲ. ಆ ದೇವಾಧಿದೇವ ಅಪ್ಪಣೆಕೊಡಲಿಲ್ಲ. ನಮ್ಮ ನಮ್ಮ ಇಷ್ಟ ದೇವತೆಗಳೆದುರು ವರ ಕೊಡಿ ಎಂದು ಪ್ರಾರ್ಥಿಸಿದ್ದೇನೊ ಆಯಿತು. ನೀನು ಅನುಗ್ರಹ ಪಡೆದೆ; ನನಗೆ ಆ ಭಾಗ್ಯವಿಲ್ಲ. ಅಂತೆಯೆ ಚಿತ್ತ ವಿಚಲಿತವಾಗಿದೆ.

**ವಿಜಯಾ**— ಸ್ವಾಮಿ, ಅಸಮಾಧಾನಕ್ಕೆ ಕಾರಣವಿಲ್ಲ. ನಮ್ಮಿಬ್ಬರಲ್ಲಿ ಭೇದವೆಂಬುದೇನಿದೆ? ನಾನು ವರಪಡೆದರೂ ನೀವೇ ಪಡೆದಂತೆಯೆ ಅಲ್ಲವೆ? ಎರಡು ಸಲ ಕೇಳಿದೆ. ಎರಡು ಸಲವೂ ಆ ಜಗನ್ಮಾತೆಯದು ಅದೇ ಆಜ್ಞೆ!

ಇದೊ, ಪ್ರಸಾದ ಎಂದು ದೊರೆತ—ಬಲಭುಜದ ಮೇಲಿನ ಈ ಪುಷ್ಪ. ಇನ್ನು ಯಾವ ಬಗೆಯ ವಿಕಲ್ಪಕ್ಕೂ ಅವಕಾಶವಿಲ್ಲ.

**ಮಂಗಲೇಶ—** ನೀನು ಹಾಗೆನ್ನುವುದು ವಿಹಿತವೆ? ನಿನ್ನಂತೆ ನನಗೂ ಪ್ರಸಾದ ದೊರೆತಿದ್ದರೆ—ಅದೆಷ್ಟು ಉತ್ಸಾಹಿತನಾಗಿ ನಾನು ಈ ಕಾರ್ಯದಲ್ಲಿ ನಿರತನಾಗುತ್ತಿದ್ದೆ. ಈಗ....ಈಗ....ಛೆ....ಮನಸ್ಸು ಅದೇಕೊ ಹಿಂಜರಿಯುತ್ತಿದೆ. ನಮ್ಮದಲ್ಲದ ರಾಜ್ಯ....ನಮ್ಮದೆಂದು ಸಾಧಿಸಬೇಕೆನ್ನುತ್ತೇವೆ! ದೇವ ಅದೆಂತು ಒಪ್ಪಿಯಾನು? ರಾಜ್ಯತೃಷ್ಣೆ....ಅಧಿಕಾರ ತೃಷ್ಣೆ....ದೇವರದೆಂತು ಒಪ್ಪಿಯಾನು?

**ವಿಜಯಾ—** ನನ್ನ ದೇವಿ ಒಪ್ಪಿದ್ದಾಳೆ. ಪ್ರಸಾದ ದಯೆಪಾಲಿಸಿದ್ದಾಳೆ.

**ಮಂಗಲೇಶ—** ನನ್ನ ದೇವರು ಒಪ್ಪಲಿಲ್ಲ. ನಾನು ಪ್ರಸಾದ ಕೇಳಿದಾಗ (ಮೈ ನಡುಗಿಸಿ) ಹಃ! ಆ ಕ್ಷಣ ನೆನೆದರೆ ಈಗಲೂ ಮೈ ನಡುಗುತ್ತದೆ! ಆಸನದಿಂದ ವಿಗ್ರಹ ಅದುರಿತು, ಎಡಗಣ್ಣಿನಿಂದ ಕಿಡಿಹಾರಿತು, ಎಡ ಕಂಕುಳಲ್ಲಿಯ ಹೂವುದುರಿತು! ಮೂರೂ ಅಶುಭ ಲಕ್ಷಣಗಳು!

**ವಿಜಯಾ—** ಎಂಥ ಅಶುಭವನ್ನೂ ನಿವಾರಿಸುವ ಶಕ್ತಿ ನನ್ನ ದೇವಿಯಲ್ಲಿದೆ. ಆ ಶಕ್ತಿಯ ಪ್ರಸಾದಬಲ ನಮ್ಮ ಬೆಂಬಲಕ್ಕಿರುವಾಗ ನಾವು ಅಂಜುವುದೇಕೆ? ಮೇಲಾಗಿ ಈ ಅಪೇಕ್ಷೆಗೆ ಕಾರಣಳು ನಾನು. ಮೊದಲು ಅದು ಅಂಕುರಿಸಿದುದೇ ನನ್ನಲ್ಲಿ. ಅಂತೇ ದೇವಿ ನನ್ನ ಅಪೇಕ್ಷೆಗೆ ಮನ್ನಣೆಯನ್ನಿತ್ತಳು.

**ಮಂಗಲೇಶ—** ನನ್ನ ದೇವರ ಅನುಗ್ರಹವೂ ನನಗೆ ಬೇಡವೆ? ವಿಜಯಾ, ನಮ್ಮ ಅಪೇಕ್ಷೆ ಸಾಮಾನ್ಯವಾದುದೆ? ಅಣ್ಣ ಕೀರ್ತಿವರ್ಮನ ರಾಜ್ಯ ನಮ್ಮದಾಗಲಿ ಎನ್ನುವ ಆಸೆ! ಇದು ಸರಿಯಾಗಬಹುದೆ?

**ವಿಜಯಾ—** ಯಾಕೆ ಸರಿಯಲ್ಲ? ಈಗ ನೀವು ರಾಜ್ಯ ಆಳುತ್ತಿಲ್ಲವೆ? ಉಳುವವನದೇ ಭೂಮಿಯಾಗುವಾಗ ಆಳುವವನ ರಾಜ್ಯವೇಕಾಗಬಾರದು?

**ಮಂಗಲೇಶ—** ಆದರೆ ನಾನು ರಾಜನಾಗಿಲ್ಲ; ರಾಜ್ಯಪಾಲನಾಗಿದ್ದೇನೆ. ಈ ರಾಜ್ಯ ಒಂದು ವಿಶ್ವಸ್ತನಿಧಿ ಎಂದು ಪಾಲನೆಮಾಡುತ್ತಿದ್ದೇನೆ.

**ವಿಜಯಾ**— ಅದೇಕೆ, ನೀವು ನಿಮ್ಮ ಬಾಹುಬಲದಿಂದ ಇದನ್ನು ಉಳಿಸಿದ್ದೀರಿ, ಬೆಳೆಯಿಸಿದ್ದೀರಿ !

**ಮಂಗಲೇಶ**— ಏನೇ ಆದರೂ ಇದು ಅಣ್ಣನದು, ಅವನ ಮಗನದು. ಕುಮಾರ ಪುಲಕೇಶಿ ಈಗ ಪ್ರಬುದ್ಧನಾಗಿದ್ದಾನೆ.

**ವಿಜಯಾ**— ಹಾಗೆ ನಮ್ಮ ಕುಮಾರ ಜಯಸಿಂಹನೂ ಪ್ರಬುದ್ಧನಾಗಿದ್ದಾನೆ. ನೀವು ಆಳುತ್ತಿರುವ ರಾಜ್ಯವನ್ನು ಪುಲಕೇಶಿಗೆ ಕೊಟ್ಟರೆ ಜಯಸಿಂಹನ ಪಾಡೇನು? ಅವನು ಭಿಕ್ಷಾಪಾತ್ರೆ ಹಿಡಿದು ತೀರ್ಥಾಟನಕ್ಕೆ ಹೋಗಬೇಕೆ ?

**ಮಂಗಲೇಶ**— ಆ ವಿಚಾರ ಬಂದಾಗಲೆಲ್ಲ ನನ್ನಲ್ಲಿಯ ನ್ಯಾಯಬುದ್ಧಿ....ಸತ್ಯಪ್ರೀತಿಗಳು ವಿಚಲಿತವಾಗುತ್ತವೆ. ಕುಮಾರ ವಿಜಯಸಿಂಹನ ಭವಿಷ್ಯ ಕಣ್ಣೆದುರು ನಿಂತು, ರಾಜ್ಯದಾಶೆಯತ್ತ ಮನವೊಲಿಯುತ್ತದೆ. ಆದರೆ ಇದು ದುರಾಶೆಯಲ್ಲವೆ ?

**ವಿಜಯಾ**— ಎಂದಿಗೂ ಅಲ್ಲ. ಈ ರಾಜ್ಯ ನಿಮ್ಮ ಅಣ್ಣನದೇನೊ ಅಹುದು. ನೀವು ನಿಮ್ಮ ಪರಾಕ್ರಮದಿಂದ ಇದನ್ನು ಸಂರಕ್ಷಿಸಿ, ವಿಸ್ತಾರಗೊಳಿಸಿರದಿದ್ದರೆ ಕೈಕೆಳಗಿನ ಮಂಡಲೇಶ್ವರರು ಇದನ್ನೆಂದೋ ನುಂಗಿಹಾಕುತ್ತಿದ್ದರು ! ಈ ರಾಜ್ಯ ಉಳಿದಿರುವುದು ನಿಮ್ಮಿಂದಲೇ ಅಲ್ಲವೆ ?

**ಮಂಗಲೇಶ**— ಅದು ನಿಜ ಪ್ರಿಯೆ. ಪುಲಕೇಶಿಗೆ ಸಲ್ಲಬೇಕಾದ ರಾಜ್ಯ ಪುಲಕೇಶಿಗೆ ಬಿಟ್ಟುಕೊಟ್ಟರೆ ನಮ್ಮ ಗತಿಯೇನು, ಮಗ ಜಯಸಿಂಹನ ಗತಿಯೇನು....ಎಂಬ ಚಿಂತೆ ನನ್ನನ್ನು ಬಾಧಿಸದೆ ಇಲ್ಲ. ಆದರೆ ಅದು ಕ್ಷಣಕಾಲ. ತನ್ನ ಪರಾಕ್ರಮದಲ್ಲಿ ವಿಶ್ವಾಸವಿದ್ದ ವೀರ ಎಂಥ ವಿಪತ್ತಿಗೂ ಎದೆಗುಂದಲಾರ. ಇಂಥ ಹತ್ತು ರಾಜ್ಯ ಗಳಿಸೇನು ಎಂಬ ವೀರ ಇದೆ ನನ್ನಲ್ಲಿ !

**ವಿಜಯಾ**— ಆ ತಮ್ಮ ಸಾಮರ್ಥ್ಯವನ್ನು ಯಾರೂ ಅಲ್ಲಗಳೆಯಲಾರರು. ಆದರೆ ಈಗ ಸಂಪಾದಿಸಿದುದನ್ನೆಲ್ಲ ಪುಲಕೇಶಿಯ ಪಾಲುಮಾಡಿದರೆ ಗುಡ್ಡಕ್ಕೆ ಕಲ್ಲುಹೊತ್ತಂತಾಗುವುದಿಲ್ಲವೆ? ನಾಳೆ ಅವನಿಗೆ ಪಟ್ಟಗಟ್ಟಿದರೆಂದರೆ ನಾವು ಈ ರಾಜ್ಯದಲ್ಲಿ ಬಾಳುವುದೇ ಕಷ್ಟವಾದೀತು. ನಮ್ಮೊಡನೆ

ಪುಲಕೇಶಿ ಎಷ್ಟು ವಂಚನೆಯಿಂದ ನಡೆದುಕೊಳ್ಳುತ್ತಾನೆಂಬುದನ್ನು ನೀವು ನೋಡುವುದಿಲ್ಲವೆ? ಜಯಸಿಂಹನು ಕಣ್ಣಿಗೆ ಬಿದ್ದರಂತೂ ಅವನ ಎದೆಯಲ್ಲಿ ಮತ್ಸರದ ಕಿಚ್ಚೇ ಏಳುತ್ತದೆ. ನನಗಂತೂ ಅವನ ತೋರಿಕೆಯ ಸವಿಮಾತು, ಸೌಜನ್ಯದ ನಡತೆ—ಎಲ್ಲ ಬೂಟಾಟಿಕೆಯೆನಿಸುವುದು.

**ಮಂಗಲೇಶ—** ಮೊದಲು ಅವನು ಹೀಗಿರಲಿಲ್ಲ. ಇತ್ತೀಚಿನ ಅವನ ನಡತೆ ಮಾತ್ರ ಇಂಥ ಸಂದೇಹಕ್ಕೆ ಎಡೆಗೊಟ್ಟಿದೆಯೇನೊ ನಿಜ. ಅವನೇ ಹೀಗೆ ವಂಚನೆಯಿಂದ ನಡೆಯುವಾಗ ನಾನೇಕೆ ಅವನನ್ನು ವಂಚಿಸಬಾರದು ಎಂಬ ಬುದ್ಧಿಯಾಗುವುದು. ಆದರೆ ಮತ್ತೆ ನನ್ನಲ್ಲಿಯ ಪಾಪಭೀರುತ್ವ ನನ್ನನ್ನು ತಡೆಗಟ್ಟುವುದು.

**ವಿಜಯಾ—** ಸ್ವಾಮಿ, ಅಂತಃಪುರದ ನಾಲ್ಕುಗೋಡೆಯ ಆಚೆಗಿನ ಪ್ರಪಂಚದ ಅರಿವಿರದ ನಾನು, ಪ್ರಪಂಚವನ್ನೇ ಅಂಕೆಯಲ್ಲಿರಿಸಿ ಆಳುವ ಸ್ವಾಮಿಗೆ ವಿಚಾರ ಹೇಳುವುದು ಅವಿಚಾರವಾದೀತೇನೊ! ನಾನು ಕೇವಲ ಸ್ವಾರ್ಥಪ್ರೇರಿತಳಾಗಿ ಹೇಳುತ್ತಿಲ್ಲ. ನೀವು ಗಳಿಸಿದ್ದಾದರೂ ನಿಮಗೆ ಉಳಿಯ ಬೇಡವೆ? ಒಂದಲ್ಲದೆ ಹದಿನೆಂಟು ಯುದ್ಧಗಳಲ್ಲಿ ವಿಜಯವನ್ನು ಸಂಪಾದಿಸಿದ ಸ್ವಾಮಿರಾಜನನ್ನು ಯುದ್ಧದಲ್ಲಿ ಸೋಲಿಸಿ, ಸಂಹರಿಸಿದ ನಿಮಗೆ ಸರಿದೊರೆಯಾಗಿ ನಿಲ್ಲುವವರು ಇನ್ನಾರಾದರೂ ಇರುವರೆ ಈ ಲೋಕದಲ್ಲಿ? ಕಲಚೂರಿಯ ಬುದ್ಧಿವರ್ಮನನ್ನು ಸೋಲಿಸಿ ನೀವು ಸಂಪಾದಿಸಿದ ಅಪಾರ ಧನ ಸಂಪತ್ತು, ಅನೇಕ ರಾಜರನ್ನು ಗೆದ್ದು ವಿಸ್ತರಿಸಿದ ಭೂಸಂಪತ್ತು ನಿಮ್ಮದೇ ಆಗಿರುವಾಗ, ಈ ರಾಜ್ಯಲಕ್ಷ್ಮಿಯನ್ನು ಇನ್ನೊಬ್ಬರ ವಶವಾಗಿಸುವುದು ಸರಿಯಾಗಬಹುದೆ? ವಂಚಕನನ್ನು ವಂಚನೆಯಿಂದಲೇ ಎದುರಿಸುವುದು ಉಚಿತ ವಲ್ಲವೇ? ಈ ಟವಳಿಗಾರ ಪುಲಕೇಶಿಗೆ ಅದೇ ಮದ್ದು!

**ಮಂಗಲೇಶ—** ಇಲ್ಲ, ವಿಜಯಾ. ಅವನನ್ನು ದೇಶಭ್ರಷ್ಟಗೊಳಿಸಿ ಚಾಲುಕ್ಯರಾಜ್ಯಕ್ಕೆ ನಾನೇ ಅಧಿಪತಿಯಾಗಬೇಕೆಂಬ ಹೆಬ್ಬಯಕೆ ನನ್ನಲ್ಲಿಲ್ಲ ಅವನು ನನ್ನ ವಿಶ್ವಾಸಕ್ಕೆ ಪಾತ್ರನಾಗಿ, ಚಲುಕ್ಯ ಸಿಂಹಾಸನಕ್ಕೆ ನಿಷ್ಠೆಯಿಂದಿರುವುದಾದರೆ, ಅವನ ಸ್ವಾಧೀನಕ್ಕೆ ಕೆಲವೊಂದು ಪ್ರದೇಶವನ್ನು ಒಪ್ಪಿಸಲು ನಾನು ಸಿದ್ಧನಿದ್ದೇನೆ. ಆದರೆ ಈಗಿರುವುದೆಲ್ಲವೂ ತನ್ನದೊಬ್ಬನದೇ ಎಂದು ಛಲತೊಟ್ಟರೆ ಮಾತ್ರ ನನ್ನ ವಿವೇಕವು ನ್ಯಾಯವಾದ ಹಾದಿಯಲ್ಲಿ

ಉಳಿದೀತೆಂದು ನನಗೆನಿಸುವುದಿಲ್ಲ. ಅವನ ತಂದೆ ಗಳಿಸಿದ ನಾಲ್ಕರಷ್ಟು ರಾಜ್ಯ ನಾನು ಸಂಪಾದಿಸಿದ್ದೇನೆ ಎಂಬ ಮಾತನ್ನು ಲೋಕವೇ ಬಲ್ಲದು.

**ವಿಜಯಾ—** ಎಷ್ಟೇ ತಾವು ಸಂಪಾದಿಸಿದ್ದರೂ ಅದೆಲ್ಲವೂ ಈಗ ತನ್ನದೇ ಎಂದು ಆ ಪುಲಕೇಶಿ ಜನರೆದುರು ಸಾರುತ್ತಿದ್ದಾನಂತೆ!

**ಮಂಗಲೇಶ—** ಅವನು ಹೀಗೆ ಅನ್ನುವನೆ? ಈ....ಈ ಮಾತು ನಿಜವೇ? ನಿಜವೇ ಆಗಿದ್ದರೆ....

**ವಿಜಯಾ—** ಕೇಳಿಕೆಯ ಸುದ್ದಿಯಂತೂ ಹೀಗಿದೆ....

**ಮಂಗಲೇಶ—** ಆದರೂ ಇದರಲ್ಲಿ ತಥ್ಯಾಂಶವಿಲ್ಲದೆ ಇಲ್ಲ.

**ವಿಜಯಾ—** ಪತಿದೇವಾ, ನೀವು ಕಾಲವಿಲಂಬ ಮಾಡದಿರಿ. ಚಲುಕ್ಯರಾಜ್ಯಕ್ಕೆ ನೀವೇ ಸರ್ವಾಧಿಕಾರಿ ಎಂಬುದನ್ನು ಈಗಲೇ ನಿರ್ಣಯಿಸಿ ಪುಲಕೇಶಿಗೆ ತಿಳುಹಿಬಿಡಿ. ಅವನು ತನ್ನ ಸ್ಥಾನವನ್ನು ತಾನು ಕಂಡುಕೊಳ್ಳಲಿ. ಬೆಂಕಿ ಹೊತ್ತುವುದರೊಳಗಾಗಿಯೆ ನಂದಿಸುವುದು ಒಳಿತಲ್ಲವೆ? ಈಗಲೆ ಅವನು ಪ್ರಬಲನಾಗಿ ಮೆರೆಯುತ್ತಿದ್ದಾನೆ.

**ಸೇವಕ—** ಮಹಾರಾಜರಿಗೆ ಜಯವಾಗಲಿ. ವಿಷ್ಣುವರ್ಮ ದಂಡನಾಯಕರು ಕಾಣಲು ಬಂದಿದ್ದಾರೆ, ಮಹಾಸ್ವಾಮಿ.

**ಮಂಗಲೇಶ—** ಕೂಡಲೆ ಅವರನ್ನು ಒಳಗೆ ಬರಮಾಡು. ವಿಜಯಾ, ನೀನು ಒಳಗೆ ಹೋಗು. ಹೊತ್ತಿಲ್ಲದ ಹೊತ್ತಿನಲ್ಲಿ ದಂಡನಾಯಕರು ಏಕೆ ಬಂದರೋ? ಏನಾದರೂ ಅಂಥ ಮಹತ್ತ್ವದ ರಾಜಕೀಯವಿರಬೇಕು.... ಏಕೋ ನನ್ನ ಬಲಗಣ್ಣು ಹಾರುತ್ತಿದೆ.

**ವಿಜಯಾ—** ಶುಭಲಕ್ಷಣ. ನಾನು ಮರೆಯಲ್ಲಿದ್ದು ನಿಮ್ಮ ಮಾತು ಕೇಳಲೇ?

**ಮಂಗಲೇಶ—** ಹಾಗೇಮಾಡು. (ವಿಜಯಾದೇವಿ ನಿಷ್ಕ್ರಮಿಸುವಳು.) ಬನ್ನಿ, ದಂಡನಾಯಕರೆ....

**ವಿಷ್ಣುವರ್ಮ—** (ಪ್ರವೇಶಿಸಿ) ಮಹಾರಾಜರಿಗೆ ವಂದಿಸುತ್ತೇನೆ.

**ಮಂಗಲೇಶ—** ಕುಳಿತುಕೊಳ್ಳಿ. ಇದೇನು, ಈ ಹೊತ್ತಿನಲ್ಲಿ ಬಂದಿರಿ.

**ವಿಷ್ಣುವರ್ಮ—** ಬರಬೇಕಾಯಿತು, ಮಹಾಸ್ವಾಮಿ. ನಾನು ತಮ್ಮ ದೇವತಾರಾಧನೆಯಲ್ಲಿ ವಿಘ್ನವುಂಟುಮಾಡಿದೆನೊ ಏನೊ !

**ಮಂಗಲೇಶ—** ಹಾಗೇನೂ ಇಲ್ಲ. ಪೂಜೆ ಯಾವಾಗಲೊ ಮುಗಿದಿದೆ. ಅದಿರಲಿ, ನೀವು ಈಗ ಅವಸರದಲ್ಲಿ ಬಂದ ಕಾರಣ ?

**ವಿಷ್ಣುವರ್ಮ—** ಒಂದು ಆನಂದದ ಸುದ್ದಿಯನ್ನು ಸನ್ನಿಧಿಗೆ ಅರುಹಲು ಬಂದೆ.

**ಮಂಗಲೇಶ—** (ಕುತೂಹಲಿಯಾಗಿ) ಅದೇನು ದಂಡನಾಯಕರೆ ! ಬೇಗ ಹೇಳಿ, ಬೇಗ ಹೇಳಿ....

**ವಿಷ್ಣುವರ್ಮ—** ಪುಲಕೇಶಿ ಬೌದ್ಧಮತವನ್ನು ಸ್ವೀಕರಿಸಿ ಭಿಕ್ಷುವಾಗಿ ಹೋಗುತ್ತಾನಂತೆ !

**ಮಂಗಲೇಶ—** (ಆಶ್ಚರ್ಯದೊಡನೆ) ಏನು ? ಪುಲಕೇಶಿ ಸಂನ್ಯಾಸಿಯಾಗುವನೆ ? ಇದು ನಿಜವೆ, ದಂಡನಾಯಕರೆ ? ಯಾವಾಗ ಹೇಳಿದ ?

**ವಿಷ್ಣುವರ್ಮ—** ನಿನ್ನೆ ರಾತ್ರಿ. ತಾನಾಗಿ ಬಂದು ಈ ಮಾತನ್ನರುಹಿದ. ಇದು ಇನ್ನೂ ಆಶ್ಚರ್ಯ !

**ಮಂಗಲೇಶ—** ಇದನ್ನು ನಂಬಬಹುದೆ, ದಂಡನಾಯಕರೆ ? ಅವನ ಈ ಆಕಸ್ಮಿಕ ಉಪರತಿಗೆ ಕಾರಣವೇನಿರಬಹುದು ?

**ವಿಷ್ಣುವರ್ಮ—** ತನಗೇನೊ ದೇವತಾಸ್ವಪ್ನವಾಗಿದೆಯಂತೆ !

**ಮಂಗಲೇಶ—** ಸ್ವಪ್ನ ! ಆಶ್ಚರ್ಯದ ಮಾತು ! ಇದರಲ್ಲಿ ಏನಾದರೂ ಮೋಸವಿರಲಿಕ್ಕಿಲ್ಲವೆ, ದಂಡನಾಯಕರೆ ? ಮೊನ್ನೆಯವರೆಗೆ ರಾಜ್ಯಕ್ಕಾಗಿ ಹಾತೊರೆಯುವ ಪುಲಕೇಶಿ, ನಿನ್ನೆಯ ಒಂದು ದಿನದಲ್ಲಿಯೇ ರಾಜ್ಯದ ಆಶೆ ತೊರೆದು, ಸಂನ್ಯಾಸಿಯಾಗುವನೆಂದರೆ ನಂಬುವ ಮಾತೆ ? ನಾನಂತೂ ನಂಬಲಾರೆ, ಸರ್ವಥಾ ನಂಬಲಾರೇ, ದಂಡನಾಯಕರೆ ?

**ವಿಷ್ಣುವರ್ಮ—** ಮಹಾರಾಜರೆ, ನಾನೂ ಅದನ್ನು ಮೊದಲು ನಂಬಿದವನೆ ಅಲ್ಲ. ಆದರೆ ಅವನು ಹೇಳುವ ಮಾತನ್ನು ಕೇಳಿದರೆ ನಂಬುವಂತಿದೆ.

**ಮಂಗಲೇಶ—** ಏನು ? ಅವನು ಹೇಳಿದ್ದಾದರೂ ಏನು, ಹೇಳಿ !

**ವಿಷ್ಣುವರ್ಮ—** ಸಾಕ್ಷಾತ್ ಬುದ್ಧದೇವನೆ ಸ್ವಪ್ನದಲ್ಲಿ ಕಾಣಿಸಿ ಕೊಂಡು, "ನೀನು ದೀಕ್ಷೆಯನ್ನು ಪಡೆದು ಧರ್ಮಪ್ರಸಾರಮಾಡು" ಎಂದು ತನ್ನನ್ನು ಆಶೀರ್ವದಿಸಿದನಂತೆ! ಅದಕ್ಕೆ ಮೊದಲು ತಾನು ರಾಜ್ಯಕ್ಕಾಗಿ ಆಶೆಪಟ್ಟುದು ನಿಜ ಎಂದು ಒಪ್ಪಿಕೊಂಡ. ಇದನ್ನು ಹೇಳುತ್ತಿರುವಾಗ ಪೂರ ಆವಿಷ್ಟನಾದವನಂತೆ ಕಂಡ! ಇದನ್ನು ನೋಡಿದರೆ ನಂಬಿಕೆ ಹುಟ್ಟು ವಂತಿದೆ, ಮಹಾರಾಜರೆ! ನಾನು ಬಹಳ ರೀತಿಯಿಂದ ಅವನನ್ನು ಪ್ರಶ್ನಿಸಿದೆ. ಆದರೆ ಅವನು ದೃಢಸಂಕಲ್ಪನಾಗಿದ್ದಾನೆ. ನಾಳೆಯ ದಿನವೇ ಇಲ್ಲಿಂದ ಹೊರಡುವುದು ಎಂದು ಸಿದ್ಧತೆ ನಡೆಯಿಸಿದ್ದಾನೆ.

**ಮಂಗಲೇಶ—** ಎಲ್ಲಿಗೆ ಪ್ರಯಾಣಮಾಡುತ್ತಾನಂತೆ, ದಂಡ-ನಾಯಕರೆ?

**ವಿಷ್ಣುವರ್ಮ—** ಅದನ್ನು ಹೇಳಲಿಲ್ಲ. ಸ್ಥಳ ಯಾವುದೆಂಬುದನ್ನು ಇನ್ನೂ ನಿಶ್ಚಯಿಸಿಲ್ಲ ಎಂದ; ಆದರೆ ಅವನು ನಾಳೆಗೆ ಹೊರಡುವುದು ಖಂಡಿತ.

**ಮಂಗಲೇಶ—** ದಂಡನಾಯಕರೆ, ನಿಮ್ಮನ್ನು ಇನ್ನೊಮ್ಮೆ ಕೇಳು ತ್ತೇನೆ—ನಿಮಗೆ ವಿಶ್ವಾಸವೆನಿಸಿತೆ ಅವನ ಮಾತಿನಲ್ಲಿ?

**ವಿಷ್ಣುವರ್ಮ—** ನನ್ನ ಅಲ್ಪ ಬುದ್ಧಿಗೆ ತಿಳಿದವುಟ್ಟಿಗೆ ಹೇಳುವು ದಾದರೆ ಅವನ ಮಾತಿನ ಮೇಲೆ ವಿಶ್ವಾಸವಿಡಬಹುದು, ಮಾಹಾರಾಜರೆ.

**ಮಂಗಲೇಶ—** ಇದನ್ನು ಒಮ್ಮೆಲೆ ನಂಬುವುದು ಹೇಗೆ ದಂಡ-ನಾಯಕರೆ? ಬೌದ್ಧಧರ್ಮವನ್ನು ಸ್ವೀಕರಿಸುವುದರಲ್ಲಿ ಉದ್ದೇಶವೇನಂತೆ?

**ವಿಷ್ಣುವರ್ಮ—** ಅಹಿಂಸಾತತ್ತ್ವಪ್ರಚಾರ, ಜಗತ್ತಿನಲ್ಲಿ ಸತ್ಯ-ಪ್ರಸಾರ, ಶಾಂತಿಪ್ರಸಾರ....ಇವೇ ಏನೇನನ್ನೋ ಹೇಳಿದ—

**ಮಂಗಲೇಶ—** ಮುಖದಿಂದ ಶಾಂತಿಪಾಠ, ಮುಸುಕಿನಲ್ಲಿ ಟೊಣ್ಣೆಯ ಸಿದ್ಧತೆ—ಇಂಥ ಮೋಸವೇನಾದರೂ ಇರಲಿಕ್ಕಿಲ್ಲವಷ್ಟೆ? ಯಾಕೆಂದರೆ ಮೋಸ ಯಾವಾಗಲೂ ಪ್ರಾಮಾಣಿಕತೆಯ ವೇಷಹಾಕಿ ಬರುತ್ತದೆ.

**ವಿಷ್ಣುವರ್ಮ—** ಜಗತ್ತಿನ ಈ ರೀತಿಯ ಅನುಭವ ನನಗೂ ಸಾಕಷ್ಟಿದೆ; ಆದರೆ ಪುಲಕೇಶಿಯ ನಿನ್ನೆಯ ಮಾತಿನಲ್ಲಿ ಅಂಥ ಮೋಸ ವೇನಾದರೂ ಇರಬಹುದೆಂದು ನನಗಂತೂ ಎನಿಸಲಿಲ್ಲ.

ಮಂಗಲೇಶ— ಹೋಗಲಿ, ದೇವರೆದುರು ನಿಂತಿದ್ದೀರಿ. ಇದನ್ನ ನೀವು ದೇವತಾಸಾಕ್ಷಿಯಾಗಿ ಹೇಳುತ್ತೀರಾ, ದಂಡನಾಯಕರೆ?

ವಿಷ್ಣುವರ್ಮ— ನನಗೆ ಅವನ ಮಾತಿನಲ್ಲಿ ವಿಶ್ವಾಸ ಉಂಟಾಯಿತು ಇದು ಸುಳ್ಳಲ್ಲ.

ಪುಲಕೇಶಿ— (ಬಿರುಗಾಳಿಯಂತೆ ಸರ್‍ರನೆ ಪ್ರವೇಶಿಸಿ) ವಂದಿಸುತ್ತೇನೆ ಚಿಕ್ಕಪ್ಪಾಜಿಯವರೆ. ಹೇಳಿಕಳುಹದೆ ಒಮ್ಮೆಲೆ ಒಳನುಗ್ಗಿದುದಕ್ಕಾಗಿ ಬಾಲ ನನ್ನು ಮನ್ನಿಸಬೇಕು. ವಂದಿಸುತ್ತೇನೆ.

ಮಂಗಲೇಶ— (ಅತ್ಯಾಶ್ಚರ್ಯದೊಡನೆ) ಯಾರು; ಪುಲಕೇಶಿ ಆಯುಷ್ಮಂತನಾಗು. ಇದೇನು ಹೀಗೆ ಆವೇಶಗೊಂಡವನಂತೆ ಬಂದೆ ಮೇಲಾಗಿ ನನ್ನನ್ನು ಕಾಣಲು ನೀನು ಹೇಳಿಕಳುಹಬೇಕೆ? ತುಸು ದಿನಗಳ ಈ ಚಲುಕ್ಯರಾಜ್ಯದ ಅಧಿಪತಿಯಾಗುವವನು ನೀನು!

ಪುಲಕೇಶಿ— ನಾನಲ್ಲ, ಚಿಕ್ಕಪ್ಪಾಜಿಯವರೆ, ತಾವು!

ಮಂಗಲೇಶ— ನಾನು! ನಾನು ಈ ಸಿಂಹಾಸನದ ಸೇವಕ, ಬ ರಾಜ್ಯಪಾಲ! ಕುಮಾರಾ, ನಿನ್ನದೆಂದು ಈ ರಾಜ್ಯನಡಸುತ್ತೇನೆ; ನ ದೆಂದು ಅಲ್ಲ. ನೀನು ಈಗ ಪ್ರಬುದ್ಧನಾಗಿರುವೆ. ನಿನ್ನ ಈ ರಾಜ್ಯವನ್ನ ನಿನ್ನ ವಶಕ್ಕೆ ಒಪ್ಪಿಸಿಕೊಂಡು, ಆಳ್ತನದ ಹೊಣೆಯಿಂದ ನನ್ನನ್ನು ಮು ಗೊಳಿಸು. ಗತಿಸಿಹೋದ ಪೂಜ್ಯ ಅಣ್ಣನ ಆಜ್ಞೆಯಿಂದೇ ನಾನು ಕರ್ತವ್ಯವನ್ನು ಇಷ್ಟುಕಾಲ ನಿರ್ವಹಿಸಿದೆ. ನನ್ನ ಕರ್ತವ್ಯ ಇಲ್ಲಿಗೆ ಮುಗಿ ಯಿತು?

ಪುಲಕೇಶಿ— ಚಿಕ್ಕಪ್ಪಾಜಿಯವರೆ, ಇದೇ ವಿಷಯವನ್ನೆ ಈ ತಮ್ಮೆದುರು ಪ್ರಸ್ತಾಪಿಸಲು ಬಂದೆ.

ಮಂಗಲೇಶ— ಸಂತೋಷ. ನೀನು ಪ್ರಸ್ತಾಪಿಸುವ ಮೊದಲೆ ನಾ ಒಪ್ಪಿ ನನ್ನ ಸಿದ್ಧತೆಯನ್ನು ಸೂಚಿಸಿರುವೆನಲ್ಲ!

ಪುಲಕೇಶಿ— ಕ್ಷಮಿಸಿರಿ, ಚಿಕ್ಕಪ್ಪಾಜಿ. ತಮ್ಮ ಭಾವನೆ ತಪ್ಪಾಗಿದೆ ನಾನು ರಾಜ್ಯವನ್ನು ಕೇಳಲು ಬಂದವನಲ್ಲ.

ಮಂಗಲೇಶ— ರಾಜ್ಯವನ್ನು ಕೇಳಲು ಬಂದಿಲ್ಲ? ಹಾಗಾದರೆ?

ಪುಲಕೇಶಿ— ಅದು ನನಗೆ ಬೇಡ ಎಂದು ಹೇಳಲು ಬಂದೆ.

ಮಂಗಲೇಶ— ಇದೇನು ಕುಮಾರಾ, ಹೀಗೆ ಮಾತನಾಡುವೆ? ಯಾರವಾದರೂ ಬೋಧನೆಗೆ ಒಳಗಾಗಿರುವೆಯೋ ಏನು?

ಪುಲಕೇಶಿ— ಅಹುದು ಚಿಕ್ಕಪ್ಪಾಜಿ. ಬೋಧನೆಯಂತೂ ನಿಜವೆ. ಆದರೆ ಅದು ನೀವು ಭಾವಿಸಿದಂತೆ ದುರ್ಬೋಧನೆಯಲ್ಲ; ಸುಬೋಧನೆ. ಮಾನವಜನ್ಮವನ್ನುದ್ಧರಿಸುವ ಸತ್ಯವಾದ, ಶಾಶ್ವತವಾದ ಬೋಧನೆ. ಈ ಲೋಕದ ಕಲ್ಯಾಣಕ್ಕಿಂತ ಪರಲೋಕದ ಕಲ್ಯಾಣದ ಹಾದಿಯೇ ಶ್ರೇಷ್ಠ ವಲ್ಲವೆ?

ಮಂಗಲೇಶ— ಕುಮಾರಾ, ಅದಲ್ಲ ಎಂದು ಹೇಳುವವರಾರು? ಆದರೆ ನೀನು ಹೀಗೆಂದರೆ ಹೇಗೆ ನಡೆದೀತು? ಆತ್ಮಕಲ್ಯಾಣದ ಹಾದಿ ಬೇರೆ ಯಾಗಿದ್ದರೂ, ಈ ಲೋಕದ ಕಲ್ಯಾಣಕ್ಕಾದರೂ ನೀನು ರಾಜ್ಯ ಪರಿಪಾಲನೆ ಮಾಡಬೇಕಾಗಿದೆ. ರಾಜನ ಹೊಟ್ಟೆಯಲ್ಲಿ ರಾಜನಾಗಿ ಹುಟ್ಟಿರುವೆ. ರಾಜನ ಕರ್ತವ್ಯ ಎಂದಾದರೂ ಈ ರಾಜ್ಯ ನಡಸಬೇಡವೆ?

ಪುಲಕೇಶಿ— ಅದನ್ನು ನೀವು ಮಾಡಿ, ಚಿಕ್ಕಪ್ಪಾಜಿ. ಇದುವರೆಗೆ ಮಾಡುತ್ತಲೆ ಬಂದಿದ್ದೀರಿ. ಕೊನೆಯವರೆಗೆ ಅದು ನಿಮ್ಮದಾಗಿಯೆ ಇರಲಿ! ನಿನ್ನೆ ದಂಡನಾಯಕರೆದುರು ಎಲ್ಲವನ್ನೂ ಹೇಳಿದ್ದೇನೆ. ಅದನ್ನವರು ಈಗಾ ಗಲೆ ನಿಮಗೆ ಶ್ರುತಪಡಿಸಿರಲು ಸಾಕು. ಮತ್ತೆ ನಾನು ಅವೇ ಮಾತುಗಳನ್ನು ಉಚ್ಚರಿಸುವುದು ಬೇಡ. ನನಗೆ ಆಶೀರ್ವಾದ ಕೊಡಿ.

ಮಂಗಲೇಶ— ಕುಮಾರಾ, ನೀನು ವಿಚಾರವಂತನಂತೂ ಇದ್ದೇ ಇರುವೆ. ಹಾಗೆ ಸ್ವತಂತ್ರನೂ ಇರುವೆ. ಈಗ ಯೋಚಿಸಿದ ಹಾದಿಯೆ ಸರಿ ಎಂದು ನೀನು ನಿರ್ಣಯಿಸಿಕೊಂಡಿದ್ದರೆ ನಾನೇನು ಹೇಳಬಲ್ಲೆ? ತರುಣ ವಯಸ್ಕನು ನೀನು, ಹೀಗೆ ಸಂನ್ಯಾಸಿಯಾಗಿ ಹೋಗುವಿ ಎಂದರೆ ನನಗೇಕೊ ಸಮಾಧಾನವೆನಿಸದು. ಆದರೆ ದೇವತಾಸ್ವಪ್ನ ಎಂದಮೇಲೆ ಅದನ್ನು ಶಿರಸಾವಹಿಸಿ ನಡೆಸಲೇಬೇಕು! ನಿನ್ನನ್ನು ಕಾಯುವ ಹೊಣೆ ಪರಮಾತ್ಮನ ಮೇಲಿದೆ. ಈ ಇಳಿವಯಸ್ಸಿನಲ್ಲಿ ನನಗಿನ್ನೂ ನಿನ್ನಂಥ ಬುದ್ಧಿ ಬರಲಿಲ್ಲ.

ಪುಲಕೇಶಿ— ಬುದ್ಧಿ ಬರುವ ಕಾಲಬರಿದಾಗ ಬಂದೇ ಬರುತ್ತದೆ. ವಯಸ್ಸಿಗೂ ಬುದ್ಧಿಗೂ ಸಂಬಂಧ ಇದೆ ಎಂದರೆ ಇದೆ; ಇಲ್ಲ ಎಂದರೆ ಇಲ್ಲ!

ಮಂಗಲೇಶ— ನಿಜ, ನಿಜ ನೀನು ಹೇಳುವ ಮಾತು!

**ಪುಲಕೇಶಿ—** ನಾನಿನ್ನು ಹೊರಡುತ್ತೇನೆ. ಹೋಗುವ ಮುನ್ನ ಚಿಕ್ಕಮ್ಮನ ಪಾದಕ್ಕೆ ನಮಿಸಿ ಹೋಗಬೇಕೆನ್ನುತ್ತೇನೆ.

**ಮಂಗಲೇಶ—** ಅಗೊ, ಅದು ನೋಡು, ನೀನು ನೆನಸುವುದೊಂದೆ ತಡ, ನಿನ್ನ ಚಿಕ್ಕಮ್ಮ ಬಂದೇಬಿಟ್ಟಳು.

(ವಿಜಯಾದೇವಿ ಪ್ರವೇಶಿಸುವಳು.)

**ಪುಲಕೇಶಿ—** ವಂದಿಸುವೆನು, ಚಿಕ್ಕಮ್ಮಾ!

**ವಿಜಯಾ—** ದೀರ್ಘಾಯುಷ್ಮಂತನಾಗು, ಕುಮಾರಾ!

**ಮಂಗಲೇಶ—** ವಿಜಯಾ, ಪುಲಕೇಶಿಗೆ ದೇವತಾಸ್ವಪ್ನವಾಗಿದೆ. ಯಂತೆ! ರಾಜ್ಯದ ಆಶೆ ತೊರೆದು ಅವನು ಬೌದ್ಧಭಿಕ್ಷುವಾಗುವನಂತೆ! ನಮ್ಮ ಆಶೀರ್ವಾದ ಪಡೆದುಕೊಂಡು ಹೋಗಲು ಬಂದಿದ್ದಾನೆ.

**ಪುಲಕೇಶಿ—** ಅಹುದು, ಚಿಕ್ಕಮ್ಮಾಜಿ.

**ವಿಜಯಾ—** ಅಯ್ಯೋ! ಈ ಎಳೆಯ ವಯಸ್ಸಿಗೆ ನಿನಗೆ ಪರಮಾರ್ಥವೆ? ಆದರೆ ಒಳ್ಳೆಯದನ್ನು ಮಾಡ ಹೊರಟವರಿಗೆ ಬೇಡ ಎನ್ನುವವರೇ ಪಾಪಿಗಳು! ಆಗಲಿ, ಕುಮಾರಾ. ನಿನ್ನ ಅಗಲಿಕೆಯಿಂದ ನಮಗೆ ಎಷ್ಟೇ ದುಃಖವಾಗುತ್ತಿದ್ದರೂ ನಾವು ಅದನ್ನು ಸಹಿಸಲೇ ಬೇಕು!

**ಪುಲಕೇಶಿ—** ಚಿಕ್ಕಮ್ಮಾಜಿ, ನಿಮ್ಮ ಕಾರುಣ್ಯದ ವಜ್ರಕವಚವನ್ನಿತ್ತು ನನ್ನನ್ನು ಇಷ್ಟು ಕಾಲ ಸಂರಕ್ಷಿಸಿದಿರಿ. ನನಗೆ ಹರಕೆ ಕೊಡಿ, ತಾಯಿ.

**ವಿಜಯಾ—** ಅದು ಎಂದಿಗೂ ಇದ್ದೇ ಇದೆಯಪ್ಪಾ.

**ಪುಲಕೇಶಿ—** ಬರುವೆ ಚಿಕ್ಕಪ್ಪಾಜಿಯವರೆ, ಬರುವೆ ಚಿಕ್ಕಮ್ಮಾ!

× × × ×

## ದೃಶ್ಯ ೨

(ಪುಲಕೇಶಿ ತನ್ನ ನಚ್ಚಿನ ಗೆಳೆಯರಾದ ರವಿಕೀರ್ತಿ, ವಿಜಯತುಂಗರೊಡನೆ ಆಪ್ತಾಲೋಚನೆಯಲ್ಲಿದ್ದಾನೆ.)

**ಪುಲಕೇಶಿ—** ಹೋದ ಕೆಲಸ ಮನಮೆಚ್ಚುವಂತಾಯಿತು, ರವಿಕೀರ್ತಿ.

**ರವಿಕೀರ್ತಿ—** ಚಿಕ್ಕಪ್ಪಾಜಿಯವರಿಗೆ ನೀನು ಅರುಹಿದ ಮಾತು ನಿಜವೆನಿಸಿತೆ ?

**ಪುಲಕೇಶಿ—** ಎನಿಸದೆಯೇನು ? ನಾನು ಅಂಥ ಆವಿರ್ಭಾವದಿಂದಲೇ ಮಾತನಾಡಿದೆ.

**ರವಿಕೀರ್ತಿ—** ನಿನಗೆ ಅಭಿನಯ ಚೆನ್ನಾಗಿ ಸಾಧಿಸುತ್ತದೆ.

**ವಿಜಯತುಂಗ—** ರಾಜನಾದವನಿಗೆ ಅದು ಅವಶ್ಯವೇ ಅಲ್ಲವೆ, ರವಿಕೀರ್ತಿ ?

**ಪುಲಕೇಶಿ—** ವಿಜಯತುಂಗ, ನಾನಿನ್ನೂ ರಾಜನಾಗಿಲ್ಲ ಎಂಬುದನ್ನು ಮರೆಯಬೇಡ.

**ವಿಜಯತುಂಗ—** ಆಲೋಚಿಸಿದಂತೆ ಎಲ್ಲ ಕಾರ್ಯಗಳೂ ಕೈಗೂಡುತ್ತ ಹೋದರೆ, ನೀನು ರಾಜನಾಗುವುದರಲ್ಲಿ ಸಂದೇಹವೇನು ?

**ಪುಲಕೇಶಿ—** ಮಿತ್ರರೆ, ನಾವು ಆಲೋಚನೆಗೊಂಡಂತೆ ನಾಟಕದ ನಾಂದಿಯಂತೂ ಚೆನ್ನಾಗಿಯೆ ನಡೆಯಿತು. ನನಗೆ ನ್ಯಾಯವಾಗಿ ಸಲ್ಲಬೇಕಾಗಿದ್ದ ರಾಜ್ಯವನ್ನು ನನಗೊಪ್ಪಿಸು ಎಂದು ಅಂಗಲಾಚಿ ಕೇಳಿಕೊಂಡರೂ, ಕೊಡದೆ ಕುಂಟ ನೆವಗಳನ್ನು ಮುಂದುಮಾಡುತ್ತಿದ್ದ ಧೂರ್ತ ಚಿಕ್ಕಪ್ಪ, ಈಗ ನಾನು ಸಂನ್ಯಾಸಿಯಾಗುವೆನೆಂಬ ವಾರ್ತೆ ತಿಳಿದಮೇಲೆ, ತನಗೆ ರಾಜ್ಯದ ಮೇಲೆ ಅಭಿಲಾಷೆಯೆ ಇಲ್ಲದವರಂತೆ ಬುಬ್ಬುಣಚಾರಮಾಡಿದ ! ಅವನ ಈ ಸೋಗನ್ನು ನಾನೂ ಬಲ್ಲೆ. ಆದರೆ ನನ್ನ ಸಂನ್ಯಾಸನಟನೆಯನ್ನು ಮಾತ್ರ ಅವನು ನಿಜವೆಂದೇ ನಂಬಿದ್ದಾನೆ !

**ರವಿಕೀರ್ತಿ—** ನಂಬಲಿ, ನಮಗೆ ಅದೆ ಬೇಕಾದುದು.

**ಪುಲಕೇಶಿ—** ಮಿತ್ರರೆ, ನಾಳೆ ಇಲ್ಲಿಂದ ಪ್ರಯಾಣ ಬೆಳೆಯಿಸುವುದೆಂದು ಎಣಿಕೆಹಾಕಿದ್ದೇವೆ. ಹೋಗುವುದೆಲ್ಲಿಗೆ, ಮುಂದಿನ ಕಾರ್ಯಾಲೋಚನೆಗಳೇನು ಎಂಬುದು ನಮ್ಮ ಮೂವರ ಹೊರತಾಗಿ ನಾಲ್ಕನೆಯವರಿಗೆ ಸರ್ವಥಾ ಮುಟ್ಟದಿರಲಿ. ರೇವತೀದ್ವೀಪದಲ್ಲಿ ಆಳುತ್ತಿರುವ ಧ್ರುವರಾಜ ಇಂದ್ರವರ್ಮನು ನಮಗೆ ಬೇಕಾದ ನೆರವನ್ನೀಯಲು ಬದ್ಧಕಂಕಣ

ನಾಗಿದ್ದಾನೆ. ಚಿಕ್ಕಪ್ಪನ ದುರಾಲೋಚನೆಗೆ ಹೇಸಿದ ನಮ್ಮ ರಾಜ್ಯದ ಮಾಂಡಲಿಕರು, ನಮ್ಮ ಸಂಕಲ್ಪವನ್ನೀಡೇರಿಸಲು ವಚನಬದ್ಧರಾಗಿದ್ದಾರೆ. ನಾವು ಇಂದ್ರುವರ್ಮನ ಆಶ್ರಯದಲ್ಲಿ ನಿಂತು, ಯುದ್ಧಸನ್ನಾಹಗಳನ್ನು ಅಣಿಗೊಳಿಸಬೇಕು. ಇಂದಿನಿಂದ ಎರಡು ತಿಂಗಳಿಗೆ ವಿಜಯದಶಮಿ. ಆ ಶುಭ ಮುಹೂರ್ತದಲ್ಲಿ ಚಿಕ್ಕಪ್ಪನ ಸೆರಗಿನಲ್ಲಿ ಪರಾಜಯವನ್ನು ಕಟ್ಟಿ, ಚಲುಕ್ಯ ಸಿಂಹಾಸನವನ್ನು ನಾನು ಪಡೆಯಲೇಬೇಕು.

**ರವಿಕೀರ್ತಿ—** ವೀರಪುಲಕೇಶಿ, ಪ್ರಭುಮಂತ್ರೋತ್ಸಾಹ ಶಕ್ತಿಸಂಪನ್ನನಾದ ನಿನಗೆ ಯಾವುದು ತಾನೆ ಅಸಾಧ್ಯ ?

× × × ×

## ದೃಶ್ಯ ೩

(ಮಂಗಲೇಶನ ಅರಮನೆ. ಮಂಗಲೇಶನು ವಿಜಯಾದೇವಿಯೊಡನೆ ಸರಸ ಸಲ್ಲಾಪದಲ್ಲಿದ್ದಾನೆ.)

**ಮಂಗಲೇಶ—** ಪ್ರಿಯೆ ವಿಜಯಾ, ನಿನ್ನ ದೇವಿಯ ಅನುಗ್ರಹವು ನಿಜವಾಯ್ತು. ನಮಗೆ ಕಂಟಕಪ್ರಾಯನಾದ ಪುಲಕೇಶಿ, ನಿನ್ನೆಯ ದಿನವೆ ರಾಜ್ಯಬಿಟ್ಟು ಹೊರಟುಹೋದನಂತೆ. ಇನ್ನು ನಿಶ್ಚಿಂತೆಯಿಂದ ರಾಜತ್ವವನ್ನು ಭೋಗಿಸಲು ಯಾರ ಅಡೆತಡೆಯೂ ಇಲ್ಲ. ಪ್ರಿಯೆ, ನಿಜವಾದ ಭಾಗ್ಯಲಕ್ಷ್ಮಿ ನೀನು !

**ವಿಜಯಾ—** ಈ ಭಾಗ್ಯಲಕ್ಷ್ಮಿಗೆ ಮಂಗಲದಾಯಕರು ನೀವೇ ಅಲ್ಲವೆ ? ಅಂತೂ ನಿಮ್ಮ ಕೀರ್ತಿಸೂರ್ಯನಿಗೆ ರಾಹುವಾಗಿ ಕುಳಿತಿದ್ದ ದುಷ್ಟಗ್ರಹ ಒಮ್ಮೆ ಮನೆಬಿಟ್ಟು ತೊಲಗಿತು.

**ಮಂಗಲೇಶ—** ಇಲ್ಲ. ವಿಜಯಾ, ಇಬ್ಬಗೆಯಾದ ನನ್ನ ಮನಸ್ಸು, 'ನಾನು ಮಾಡುತ್ತಿರುವುದು ನ್ಯಾಯವೆ?' ಎಂಬ ತೊಳಲಾಟದಲ್ಲಿತ್ತು. ಆ ನನ್ನ ತೊಳಲಾಟವನ್ನು ದೇವರು ತಾನಾಗಿಯೆ ತಪ್ಪಿಸಿದ. ಮದ್ದಿಲ್ಲದೆ ಮಹಾರೋಗ ಹೋಯಿತು. ನನ್ನ ಆನಂದಕ್ಕೆ ಪಾರವೇ ಇಲ್ಲ.

**ವಿಜಯಾ—** ಇದರ ಸೂಚಕವಾಗಿ ರಾಜ್ಯದಲ್ಲೆಲ್ಲ ಆನಂದೋತ್ಸವ ಗಳು ಜರುಗಲಿ. ಎಲ್ಲ ಪ್ರಜರೂ ಅದರಲ್ಲಿ ಭಾಗಿಗಳಾಗಲಿ.

**ಮಂಗಲೇಶ—** ಛೆ, ಹಾಗೆ ಮಾಡುವುದು ಬೇಡ. ಲೋಕಾಪವಾದ ಬಂದೀತು. ಈ ಆನಂದೋತ್ಸವ ಅರಮನೆಯಮಟ್ಟಿಗೇ ಮರ್ಯಾದಿತವಾಗಲಿ. ದೇವರಿಗೆ ಮಹಾಪೂಜೆ, ಮಹಾನೈವೇದ್ಯ ಮಾಡಿಸು. ಬ್ರಾಹ್ಮಣರಿಗೆ ಸಂತರ್ಪಣೆಯಾಗಲಿ. ಪರಿಜನರನ್ನು ಕಾಣಿಕೆ, ಉಡುಗೊರೆಗಳಿಂದ ಸಂತಯಿಸು.

**ವಿಜಯಾ—** ಇವೆಲ್ಲ ನಡೆದಮೇಲೆ ನೃತ್ಯಗಾಯನಾದಿಗಳು ಬೇಡವೆ ?

**ಮಂಗಲೇಶ—** ಅವಶ್ಯವಾಗಿ ಬೇಕು. ವಿಜಯಾ, ಗಾಯನವೆಂದರೆ ನೆನಪಾಯಿತು. ನೀನು ಗಾಯನಕಲೆಯನ್ನೂ ಬಲ್ಲೆ. ಈ ಸಂತೋಷದ ಕಾಲಕ್ಕೆ ನಿನ್ನ ಕಂಠಮಾಧುರ್ಯದ ಸವಿಯನ್ನುಣಿಸುವೆಯಾದರೆ ನಾನು ಭಾಗ್ಯವಂತನೇ ಸರಿ.

**ವಿಜಯಾ—** ಅದಕ್ಕೇಕೆ ಇಷ್ಟೊಂದು ಯಾಚನೆ ? ನಿಮಗಾಗಿಯೇ ಮೀಸಲಾಗಿದ್ದುದು ನಿಮಗೇ ಸಲ್ಲಬೇಕಲ್ಲವೆ ? ಒಳಗೆ ನಡೆಯಿರಿ; ವೀಣೆಯನ್ನು ನುಡಿಸುತ್ತ ಹಾಡುಹೇಳುತ್ತೇನೆ.

× × × ×

## ದೃಶ್ಯ ೪

(ಮಂಗಲೇಶನು ಸರ್ವತಂತ್ರ ಸ್ವತಂತ್ರನಾದ ಚಲುಕ್ಯಾಧಿಪತಿ:ಎಂದು ಉಬ್ಬಿ, ಮೈಮರೆತು, ಭೋಗಾಸಕ್ತನಾಗಿ ದಿನಗಳೆಯುತ್ತಿರಲು, ಪುಲಕೇಶಿಯು ಅಗಣಿತ ಸೇನಾಸನ್ನಾಹದೊಡನೆ ದಂಡೆತ್ತಿಬಂದು ಮಂಗಲೇಶನ ರಾಜಧಾನಿಯಾದ ವಾತಾಪಿ ಪುರದ ಮೇಲೆ ಆಕಲ್ಪಿತವಾಗಿ ದಾಳಿಯಿಡುವನು. ಅಶ್ವಿನ ಶುದ್ಧ ಪ್ರತಿಪದೆಯ ದಿನ ಮಂಗಲೇಶನ ಪಡೆಗೂ, ಪುಲಕೇಶಿಯ ಪಡೆಗೂ ಅತಿ ನಿಕರವಾದ ಕಾಳಗವೆಸಗುವುದು. ಹೀಗೆ ಎಂಟು ದಿನಗಳವರೆಗೆ ಅಹೋರಾತ್ರಿ ನಡೆದ ಭೀಕರವಾದ ಸಮರದಲ್ಲಿ ತನ್ನ ಸೈನ್ಯವು ಅಪಾರ ಸಾವುನೋವಿಗೆ ಗುರಿಯಾಗಿ ಸೋಲುವ ಸಂದರ್ಭವೊದಗಲು, ಮಂಗಲೇಶನು ತಾನೆ ಸಮರಾಂಗಣಕ್ಕೆ ನುಗ್ಗಿ, ಪುಲಕೇಶಿಗೆ ಎದುರಾಳಿಯಾಗಿ ಕಾದಲನುವಾಗುವನು. ಇದರಿಂದ ಉತ್ಸಾಹಗೊಂಡು ಮಂಗಲೇಶನ ಸೈನಿಕರು ಜೀವದ ಪರವೆಯಿಲ್ಲದೆ ಕಾದುವರು. ಆದರೆ ಪುಲಕೇಶಿಯ ಬಂಟರು ಹಸಿದ ಹುಲಿ

ಗಳಂತೆ ಉದ್ರಿಕ್ತರಾಗಿ, ಶತ್ರುಗಳ ಮೇಲೆ ಹರಿದುಬಿದ್ದು, ತೀಕ್ಷ್ಣವಾದ ಶೂಲ, ಕೊಡಲಿ, ಹಾರಿ, ಸೊನ್ನೆ, ಬೆಣೆ, ಬಿಲ್ಲು, ಅಂಬು, ಅಡ್ಡಾಯುಧ ಮುಂತಾದುವುಗಳಿಂದ ಮಂಗಲೇಶನ ಸೈನ್ಯವನ್ನು ಪುಡಿಪುಡಿಮಾಡತೊಡಗುವರು. ಕೊನೆಗೆ ಪುಲಕೇಶಿಯು, ತನ್ನೊಡನೆ ಭೀಕರವಾಗಿ ಕಾದುತ್ತಿರುವ ಮಂಗಲೇಶನ ಗುರಿತಪ್ಪಿಸಿ, ಅವನ ಎದೆಯಲ್ಲಿ ನಾಟುವಂತೆ ತ್ರಿಶೂಲವನ್ನೆಸೆಯುವನು. ಅದರ ಹೊಡೆತಕ್ಕೆ ಮಂಗಲೇಶನು ಗಾಯ ಗೊಂಡು, ಎಚ್ಚರದಪ್ಪಿ, ಅಲ್ಲಿಯೆ ಪ್ರಾಣಬಿಡುವನು. 'ಮಂಗಲೇಶರು ಮಡಿದರು, ಮಂಗಲೇಶರು ಮಡಿದರು' ಎಂದು ಸಮರಾಂಗಣದಲ್ಲಿ ಕೋಲಾಹಲವೇಳುವದು. ಈ ಕೋಲಾಹಲ ಸಣ್ಣದನಿಯಲ್ಲಿ ಕೇಳಬರುತ್ತಿರುವಾಗ—)

**ರವಿಕೀರ್ತಿ—** ಭಾಪು ಪುಲಕೇಶಿ, ಚಿಕ್ಕಪ್ಪನನ್ನು ಕೊಂದು ಇಂದು ಜಯಶಾಲಿಯಾದೆ.

**ಪುಲಕೇಶಿ—** ರವಿಕೀರ್ತಿ, ಹಾಗೆನ್ನಬೇಡ. ನನ್ನ ರಾಜ್ಯವನ್ನಪಹರಿಸಿದ ಅಧರ್ಮಿಯನ್ನು ಕೊಂದೆ ಎಂದು ಹೇಳು. ಎದುರಾಳಿಯಾಗಿ ಸಮರಕ್ಕೆ ನಿಂತ ಶತ್ರುವು ಚಿಕ್ಕಪ್ಪನಾದರೇನು, ಹಿರಿಯಪ್ಪನಾದರೇನು ?

**ರವಿಕೀರ್ತಿ—** ಸರಿಯೆ. ಹಿಂದಕ್ಕೆ ಪಾಂಡವರು ಮಾಡಿದ್ದನ್ನೇ ಇಂದು ನೀನು ಮಾಡಿದೆ.

**ಪುಲಕೇಶಿ—** ರವಿಕೀರ್ತಿ, ಅಧರ್ಮಕ್ಕೆಳಸಿದವನು ತನ್ನ ಪಾಪದಿಂದಲೆ ಸಾಯುತ್ತಾನಂತೆ. ಅದಿರಲಿ, ಕೈಕಟ್ಟಿಕೊಂಡು ಕುಳಿತಿದ್ದರೆ ಸಾಯುವ ವರೆಗೂ ನನಗೆ ರಾಜ್ಯ ದೊರೆಯುತ್ತಿರಲಿಲ್ಲ. ಬೇಡಿ ಬೇರೆ ಏನನ್ನೂ ದೊರಕಿಸ ಬಹುದು. ರಾಜ್ಯಗೀಜ್ಯಗಳು ದೊರೆಯಲಾರವು. ಅವನ್ನಾಕ್ರಮಿಸಿದವರನ್ನು ಪರಾಭವಗೊಳಿಸಿಯೆ ಗಳಿಸಬೇಕಾಗುವುದು. ಇರಲಿ, ನಾವಂತೂ ಈಗ ಜಯಶಾಲಿಗಳಾಗಿದ್ದೇವೆ. ಇನ್ನು ವಿಜಯೋತ್ಸಾಹದೊಡನೆ ಪುರವನ್ನು ಪ್ರವೇಶಿಸುವ. ಇಂದು ವಿಜಯದಶಮಿ. ಈ ಸುಮುಹೂರ್ತದಲ್ಲಿ ರಾಜ್ಯಾಭಿಷೇಕದೊಡನೆ ರಾಜ್ಯದಲ್ಲೆಲ್ಲ ವಿಜಯೋತ್ಸವಗಳು ಜರುಗಲಿ. ರವಿಕೀರ್ತಿ, ನೀನು ಏಕನಿಷ್ಠೆಯಿಂದ ಸಲ್ಲಿಸಿದ ಸೇವೆಗೆ ಏನು ಬೆಲೆಕೊಟ್ಟರೂ ಕಡಮೆಯೆ. ನೀನು ನನ್ನ ರಾಜ್ಯಕ್ಕೆ ಮಹಾಮಂತ್ರಿಯಾಗಿರತಕ್ಕದ್ದು. ಹಾಗೆಯೆ ವಿಜಯತುಂಗ, ನೀನು ನನ್ನ ರಾಜ್ಯದ ದಂಡನಾಯಕ. ಈ ವಿಜಯಕ್ಕೆ ಕಾರಣರಾದ ಇಂದ್ರವರ್ಮ ಹಾಗು ಇತರ ಮಾಂಡಲಿಕರಿಗೆ ಮನ್ನಣೆ ಸಲ್ಲಲಿ.

---

# ೨. ವಾ ರ ಸ ದಾ ರ್

(ಸಾಮಾಜಿಕ ಏಕಾಂಕಿಕೆ)

## ಪರಿಚಯ

ಇದೊಂದು ಸಾಮಾಜಿಕ ಕಥಾವಸ್ತುವಿನಿಂದ ಕೂಡಿದ ಏಕಾಂಕನಾಟಕ. ಲೌಕಿಕ ಜೀವನದಲ್ಲಿ ಕಣ್ಣಿಗೆ ಬೀಳುವ ವಾಸ್ತವ ಘಟನೆಗಳೇ ಇದರಲ್ಲಿವೆ. ಮಾನವನಲ್ಲಿಯ ಹೀನಮನದ ಸ್ವಾರ್ಥ ಆತನಿಂದ ಎಂತೆಂತಹ ಕಿಡಿಗೇಡಿತನವನ್ನು ಮಾಡಲು ಹಚ್ಚುವು ದೆಂಬುದು ಇದರಲ್ಲಿ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ. ಅದರಂತೆಯೆ ನಿಷ್ಪಾಪ ಹೃದಯದ ನಂಬುಗೆಯ ಜೀವ, ಸತ್ಯ-ನ್ಯಾಯಗಳ ಸಂರಕ್ಷಣೆಗಾಗಿ ಹೇಗೆ ಒಳ ಗೊಳಗೇ ಕಳವಳಗೊಳ್ಳುವುದೆಂಬುದರ ಚಿತ್ರಣವೂ ಇದರಲ್ಲಿ ಚೆನ್ನಾಗಿ ಮೂಡಿದೆ. ಇದು ರಂಗಭೂಮಿಯ ಮೇಲೆ ಯಶಸ್ವಿಯಾಗಿ ಪ್ರದರ್ಶಿತವಾದ ನಾಟಕ.

ಇದರ ಲೇಖಕರಾದ ಶ್ರೀಮಾನ್ ಸಿ. ಎಸ್. ಕುಲಕರ್ಣಿ (ಚಿದಂಬರಾನಂದ) ಅವರು ಎಂ. ಎ., ಬಿ. ಟಿ. ಪದವೀಧರರು. ಕವಿಗಳು, ಕತೆಗಾರರು, ಕಾದಂಬರಿ ಕಾರರು. ನಾಲ್ಕೈದು ವರ್ಷ ಕಾಲೇಜಿನಲ್ಲಿ ತತ್ತ್ವಶಾಸ್ತ್ರದ ಪ್ರಾಧ್ಯಾಪಕರಾಗಿ ಕೆಲಸ ಮಾಡಿ ಈಗ 'ಜಯಂತಿ' ಮಾಸಪತ್ರಿಕೆಗೆ ಸಂಪಾದಕರಾಗಿರುವರು. ಇವರು ಬೆಳಗಾವಿ ಜಿಲ್ಲೆಯ ಬೈಲಹೊಂಗಲದವರು; ಸದ್ಯಃ ಧಾರವಾಡದಲ್ಲಿಯೆ ಇರುವರು.

## ಪಾತ್ರಪರಿಚಯ

- ದೊಡ್ಡರಾಯರು (ನಿವೃತ್ತ ಕಲೆಕ್ಟರು)
- ಶಾಮರಾಯರು (ದೊಡ್ಡರಾಯರ ತಮ್ಮ ನಿವೃತ್ತ ಮಾಮಲೇದಾರ್)
- ಭೀಮರಾಯರು (ದೊಡ್ಡರಾಯರ ಭಾವಮೈದುನ- ನಿವೃತ್ತ ಫೌಜ್‌ದಾರ್)
- ಕಲ್ಲಂಭಟ್ಟರು (ದೊಡ್ಡರಾಯರ ಮನೆಯ ಪುರೋಹಿತರು)
- ಮಲ್ಲ (ದೊ. ರಾ. ರ ಮನೆಯ ಆಳು)
- ಫಕೀರಪ್ಪ (ಕೋರ್ಟಿನ ಬೇಲೀಫ್)
- ರಂಗರಾಯರು (ನ್ಯಾಯಾಧೀಶರು)

(ದೊಡ್ಡರಾಯರ ಮನೆಯ ದಿವಾಣಖಾನೆ. ಪ್ರೇಕ್ಷಕರಿಗೆ ಎದುರಾಗಿ ದೊಡ್ಡ ರಾಯರ ದೊಡ್ಡ ಭಾವಚಿತ್ರವಿದೆ. ಆ ಭಾವಚಿತ್ರದ ಕೆಳಗೆ ಹಳೆಯ ಕಾಲದ ಒಂದು ದೊಡ್ಡ ಆರಾಮುಕುರ್ಚಿಯಿದೆ. ಅದರಲ್ಲಿ ಆತು ಕುಳಿತುಕೊಳ್ಳಲು ದಿಂಬು ಇದೆ. ಅದರ ಎಡಬಲದಲ್ಲಿ ಕುಳಿತುಕೊಳ್ಳಲು ಹಳೆಯ ಪದ್ಧತಿಯ ಒಳ್ಳೆಯ ಕುರ್ಚಿಗಳಿವೆ. ದೊಡ್ಡರಾಯರ ಫೋಟೋದ ಕೆಳಗೆ ಒಂದು ಗೋಡೆಯ ಗಡಿಯಾರ (Wall Clock) ಇದೆ. ತೆರೆ ಸರಿಸಿದಾಗ ರಂಗಸ್ಥಳವು ತೆರವಾಗಿರುತ್ತದೆ.)

ಭೀಮರಾಯ : (ಪ್ರವೇಶಿಸಿ) ಎಲಾ! ಯಾರಿಲ್ಲೇನು? ಆ ಶಾಮರಾಯ ಇಲ್ಲೇ ಕೂತಾನ ಅಂತ ತಿಳಕೊಂಡಿದ್ದೆ. ಎಲ್ಲ್ಯೋ ಹೋಗ್ಯಾನ. ಆದರ........ಮತ್ತೇನು ಮಸಲತ್ತು ಮಾಡಲಿಕ್ಕೆ ಅಂತ ಹೋಗ್ಯಾನೊ, ಯಾರಿಗ್ಗೊತ್ತು ? (ವಿಚಾರಿಸಿ) ಏನೇ ಆಗಲಿ, ಇನ್ನ ಹೀಂಗ ಸುಮ್ಮನs ಕೂತರ, ಈ ಆಸ್ತಿ ನನ್ನ ಕೈಗೇನು ಹತ್ತೂದಿಲ್ಲ. ಅದಕ್ಕ ಸ್ವಲ್ಪ ಧೈರ್ಯ ಮಾಡಬೇಕು. (ವಿಚಾರಿಸಿ) ಅಂದ್ಹಾಂಗ ಆ ಮಲ್ಲ್ಯಾಗ ಒಂದು ಟ್ರಿಕ್ಕು ಗೊತ್ತುಮಾಡಿಕೊಂಡು ಬಾ ಅಂತ ಹೇಳಿದ್ದೆ. ಮತ್ತು ಯಾರಿಗೂ ಗೊತ್ತಾಗೂದಕಿಂತಾ ಮೊದಲs, ಈ ಮನ್ಯಾಗಿನ ಸಾಮಾನೆಲ್ಲಾ ಹೊತ್ಹಾಕಿ ಬಿಡೋಣು. (ಗಡಿಯಾರದ ಕಡೆಗೆ ನೋಡಿ) ಎಲಾ, ನಾಲ್ಕು ಹೊಡೀತು. ಈ ಮಲ್ಲ್ಯಾ ಇನ್ನೂ ಬಂದಿಲ್ಲ್ಯಾಕ? ಅಥವಾ ಬಂದು ಒಳಗs ಯಾವ ದಾದರೂ ಖೋಲ್ಯಾಗ ಕೂತು ಕಾಲು ಕಡಿ ಎತ್ತಿ ಹಾಕೋ ಉದ್ಯೋಗ ನಡಿಸ್ಯಾನೇನು ಮತ್ತ ? ಈಗಿನ ದಿವಸದಾಗ ಈ ಆಳು ಮನುಸ್ಯಾರನ್ನs ನಂಬೋಹಾಂಗಿಲ್ಲ. ಅದಕ್ಕ ಮಲ್ಲ್ಯಾ ಒಳಗ ಎಲ್ಲ್ಯಾದರೂ ಇದ್ದಾನೇನೋ ನೋಡೇ ಬರೋಣ. (ಹೋಗುವನು)

ಮಲ್ಲ : (ಮೆಲ್ಲನೆ ಬರುವನು) ಇದೇನಿದು? ಆಂ! ಇಬ್ಬರೂ ಹೊರಟು ಹೋದರೇನು? ಬೇಸ್ಯಾತು ಬಿಡು. ಪೀಡಾ ಹೋದ್ಹಾಂಗ ಆತು. ಆದರ.... ಅತ್ತs ಹೋಗಬೇಕಲಾ ಇವು. (ಅತ್ತಿತ್ತ ನೋಡಿ) ನಮ್ಮ ದೊಡ್ಡರಾಯರಿಗೆ ಚಾಲವರದು ಹೇಳಿದ್ನಿ 'ಎಪ್ಪಾs, ಧಣೇರs, ಈ ಎರಡೂ ಮುದುವಗಳನ್ನ ನಂಬಬ್ಯಾಡ್ರೀ. ಇವರ ಮ್ಯಾಲ ಮನಿಬಿಟ್ಟು ಯಾತ್ರೀ ಮಾಡಾಕ ಹೋಗ ಬ್ಯಾಡ್ರೀ—ಅಂತ. ಆದರ ಅವರು ಕೇಳsಲಿಲ್ಲ, ಹಾಂಗ ಹೊರಟು ಹೋಗಿ ಬಿಟ್ರು. (ಕುರ್ಚಿಗಳನ್ನು ಸ್ವಚ್ಛಮಾಡುವನು. ಆದಾದ ಮೇಲೆ) ಆದೇನಾತೋ ಏನೋ, ಹೋದವರು ಕೈಲಾಸಕ್ಕs ಹೋದರಂತ! ಏನ ಬಂತಪಾ ಈಗಿನ

ಕಾಲಾ ಅಂತೇನಿ. ಹೊರಗ ಹೋದವರು ತಿರಿಗಿ ಬರತಾರನ್ನೊದs ನೇಮಿಲ್ಲ. ಇನ್ನ ಊರಿಗೆ ಹೋದವರಿಗಂತೂ ದೇವರs ಗತಿ. (ದೊಡ್ಡರಾಯರ ಕುರ್ಚಿ ಸ್ವಚ್ಛಮಾಡುವನು). ಆತ್ಯು. ನಮ್ಮ ದೊಡ್ಡರಾಯರು ಪುಣ್ಯೇವ ಮಾಡಿದ್ರಂತ ಕಾಶೀಒಳಗ ಮರಣ ಬಂತು; ನಾ ಏನ ಪಾಪಾ ಮಾಡಿದೇನ್ನೋ, ಈ ಎರಡೂ ಮುದುವಗೋಳ ಕೂಡ ಗೋಳ್ಯಾಡಬೇಕಾಗೇತಿ. (ಅತ್ತಿತ್ತ ನೋಡಿ) ಈ ಭೀಮರಾಯಾ ಈ ಶಾಮರಾಯಾ ಕೂಡಿ, ದೊಡ್ಡ ರಾಯರ ಈ ದೊಡ್ಡ ಆಸ್ತಿ ಎತ್ತಿ ಹಾಕಾಕ ಸಂಚು ನಡಿಸ್ಯಾರು. ದೊಡ್ಡ ರಾಯರು ಕೈಲಾಸ:ಕಂಡು ಇನ್ನೂ ತಿಂಗಳಾಗಿಲ್ಲ; ಇಷ್ಟರೊಳಗs ಮನೀಗೆ ಹೆಗ್ಗಣ ಹತ್ತಿದ್ಹಾಂಗ ಆಗ್ಯೇತಿ....ಹೆಗ್ಗಣ! ಇವನೂ ತಮ್ಮ ಮಂದಿನ್ನ ಊರಿಗೆ ಕಳಿಸಿದಾನು. ಅವನೂ ತಮ್ಮ ಮಂದಿನ್ನ ಊರಿಗೆ ಕಳಿಸಿದಾನು. ಈಗ ಈ ಆಸ್ತೀ ಎಲ್ಲಾ—ಹ್ಯಾಂಗ ತಾ ಒಬ್ಬನs ಎತ್ತಿಹಾಕಬೇಕುs—ಅಂತ ಇಬ್ಬರೂ ಬ್ಯಾರೆ ಬ್ಯಾರೆ ಮಸಲತ್ತು ನಡಿಸೀದಾರು. (ವಿಚಾರಿಸಿ) ನಮ್ಮ ಕಲ್ಲಂಭಟ್ಟರು ಊರಾಗಿದ್ದಿದ್ರ ಏನಾರೇ ಮಾಡಾಕ ಬರತಿತ್ತು. ಅವರೂ ಇಲ್ಲ. ಅಂತೂ ಇವರಿಬ್ಬರೂ ಈ ಮನಿಗೆ ಬಂದಾಗ್ನಿಂದ ಈ ಮನ್ಯಾಗ ಬೆಳವ ಹೊಕ್ಕಾಂಗ ಆಗೇತಿ, ಬೆಳವ....

**ಭೀಮರಾಯ :** (ಪ್ರವೇಶಿಸಿ) ಏನಲೇ ಮಲ್ಲ್ಯಾ ಅದು? ಏನೋ 'ಬೆಳವ' ಅನ್ನಾಕ ಹತ್ತೀದಿ. ಯಾರಲೇ ಬೆಳವ?

**ಮಲ್ಲ :** (ಚಕಿತನಾಗಿ) ಬೆಳವಾ? ಬೆಳವಲ್ಲರೀ ಕಳವು! ಈ ಊರಾಗ ಕಳವು ಭಾಳ ನಡದಾವಂತ್ರಿ! ಕೊಟ್ಟದ್ದು ಕೊಟ್ಟಲ್ಲೇ ಇಟ್ಟದ್ದಿಟ್ಟಲ್ಲೇ ಸಾಮಾನು ಹೋಗಾಕ ಹತ್ತ್ಯಾವಂತರಿ! ಮತ್ತs—ಮತ್ತ ಅಗದೀ ಗುರುತು ಇಸ್ವಾಸ ಇದ್ದವರs ಕಳವು ಮಾಡ್ಲಾಕ ಹತ್ತ್ಯಾರಂತರಿ. ಏನ ಕಾಲ ಬಂತಪಾ ಅಂತೇನಿ!

**ಭೀಮರಾಯ :** ಅದಿರಲಿ, ನಾ ಹೇಳಿದ ಕೆಲಸಾ ಏನು ಮಾಡಿ-ದೆಲೇ, ಒಂದು ಟ್ರಕ್ಕು ಗೊತ್ತುಮಾಡಿಕೊಂಡು ಬಾ ಅಂತ ಹೇಳಿದ್ದಿಲ್ಲs?

**ಮಲ್ಲ :** ಅದಕ್ಕೇs ಹೋಗಿದ್ನಿರಿ, ಅಷ್ಟರಾಗs ಮತ್ತೇನೋ ಸುದ್ದೀ ಕೇಳಿದ್ಹಾಂಗ ಆತ್ಯು; ಆದಕs ಗಡಾನ ಓಡಿಬಂದಿನಿರಿ.

**ಭೀಮರಾಯ :** ಏನಲೇ ಅದು ಸುದ್ದಿ? ಗಡಾನ ಹೇಳು.

ಮಲ್ಲ : (ಅತ್ತಿತ್ತ ನೋಡುವನು)

ಭೀಮರಾಯ : ಆ ಬೆಳವ ಹೊರಗ ಹೋಗೇತಿ, ನೀ ಅಂಜದ್ಯ ಅಳಕದ್ಯ ನನ್ನ ಮುಂದ ಹೇಳು. ಅಲ್ಲಲೇ ಮಲ್ಲ್ಯಾ, ನನ್ನಂಥಾ ಫೌಜ-ದಾರಾ ನಿನ್ನ ಮುಂದಿರೊವಾಗ, ಹೆದರತೀ ಅಲ್ಲಲೇ, ಗಡಾನs ಹೇಳು.

ಮಲ್ಲ : ಏನೋ ಇಂದ ನಿಮ್ಮನ್ನs ಈ ಮನಿಂದ ಹೊರಗೆ ಹಾಕೇ ಬಿಡತಾರಂತರೀ ! ಅದಕ್ಕ ಮಂದಿನ್ನ ಕರಕೊಂಡು ಬರ್ಲ್ಯಾಕ ಹೋಗಿದಾರಂತ....ಏನೋ ಸುದ್ದಿ ಹತ್ತಿ....

ಭೀಮರಾಯ : ಏನಂದಿ ? ನನ್ನ ಹೊರಗ ಹಾಕತಾನಂತs ಆ ಮುದುವ ? ಅದಕ್ಕs ಈಗ ಹೊರಗ ಹೋಗ್ಯಾನ ಕಾಣಸ್ತದ....ಹೋಗಲಿ, ಹೋಗಲಿ. ಹೊರಗ ಹೋದಾಂವ ಹೊರಗs ಹೊಗೋ ಹಾಂಗ ಮಾಡತೀನಿ. ಈ ಭೀಮರಾಯ ಸುಮ್ಮನ ಚೆಂದಕ್ಕೆಂತ ಈ ಹುರಿಮೀಸಿ ಬಿಟ್ಟ್ಯಾನೇನು ? (ಮೀಸೆಯ ಮೇಲೆ ಕೈಹಾಕುವನು) (ವಿಚಾರಿಸಿ) ಏ ಮಲ್ಲ್ಯಾ, ನೀ ಈಗ ಹೋಗಿ ಆ ಟ್ರಕ್ಕಿನವನ್ನ ಕರಕೊಂಡು ಬಾ ! ಮತ್ತs ಆ ದೊಡ್ಡ ರಾಯರ ಬಂದೂಕು ಅದs ನೋಡು, ಅದನ್ನ ತಗೊಂಡ್ ಬಾ. ನೋಡೇ ಬಿಡತೇನಿ ಒಂದು ಕೈ, ನಾ ಮೂವತ್ತು ವರುಷ ಫೌಜದಾರಿಕೀ ಮಾಡಿದ್ದು ಫುಕಟs ಅಂತ ತಿಳದೀ ಏನು ?

[ಇಷ್ಟರಲ್ಲಿ ಶಾಮರಾಯನು ಹೊರಗಿನಿಂದ ಬರುವನು.]

ಶಾಮರಾಯ : ನಾನೂ ಮೂವತ್ತು ವರುಷ ಫುಕಟ್ ಮಾಮಲೇದಾರಿಕೀ ಮಾಡಿಲ್ಲ. ನಾ ಮನ್ಯಾಗ ಇಲ್ಲದಾಗ, ಇಬ್ಬರೂ ಕೂಡಿ ಏನು ಮಸಲತ್ತು ನಡಿಸೀರಿ ?

ಭೀಮರಾಯ : (ಸಿಟ್ಟಿನಿಂದ) ನಾ ಮಸಲತ್ತು ನಡಿಸಿಲ್ಲ, ನೀ ನಡಿಸೀದಿ ನೀ ! ನನ್ನs ಇವೊತ್ತs ಮನೀ ಬಿಟ್ಟು ಹೊರಗ ಹಾಕಾಂವs ನೀನು ? ಏನೋ ದೊಡ್ಡರಾಯರ ತಮ್ಮ ಅಂತ ನಾ, ಇಲ್ಲೀವರಿಗೆ ಕೈಕಾಯ್ದೆ, ಆದರ ಇನ್ನ ಮಾತ್ರ ಸಾಧ್ಯ ಇಲ್ಲ.

ಶಾಮರಾಯ : ನೀ ಆದ್ರೂ ದೊಡ್ಡ ರಾಯರ ಬೀಗ ಅಂತ ನಾನೂ ಇಲ್ಲಿತನಕಾ ಸುಮ್ಮನs ಇದ್ದೆ. ಇವೊತ್ತು ನಿನ್ನ ಮನೀಬಿಟ್ಟು ಹೊರಗಹಾಕದಿದ್ದರ, ನನ್ನ ಹೆಸರು ಶಾಮರಾಯನs ಅಲ್ಲ.

**ಭೀಮರಾಯ :** ಓಹೋ, ನಿನ್ನ ಮಾಮಲೇದಾರಿಕಿ ಇಲ್ಲೀ ತನಕಾ ಬಂತೇನು? ಇವತ್ತs ತಿಳದು ಹೋಗಲಿ; ನಿನ್ನ ಮಾಮಲೇದಾರಿಕಿ ಹೆಚ್ಚೋ ನನ್ನ ಫೌಜದಾರಿಕಿ ಹೆಚ್ಚೋ ಅನ್ನೋದು!

[ಗಾಬರಿಯಾಗಿ ನಿಂತ ಮಲ್ಲನ ಕಡೆಗೆ ತಿರುಗಿ]

ಏ ಮಲ್ಲಾ, ಹೀಂಗ್ಯಾಕ ನಿಂತೆಲೇ ನೀ, ದೆವ್ವ ಬಡದವರ ಹಾಂಗ? ನೆನಪಿಲ್ಲೇನು ನಾ ಹೇಳಿದ್ದು? ಲಗೂ ತಗೊಂಡ್ ಬಾ.

[ಮಲ್ಲನು ಹೊರಡುವನು]

**ಶಾಮರಾಯ :** ಏ ಮಲ್ಲ್ಯಾ! ಹೋಗಬ್ಯಾಡ, ಬಾರಲೇ ಇಲ್ಲೆ! (ಬರುವನು) ಅವರೇನು ತರ್ಲಾಕ ಹೇಳಿದರು ನಿನಗs? ಇಲ್ಲೆ ನನ್ನ ಮುಂದ ಹೇಳು. ಏನೋ ಗುಂಡು, ಬಂದೂಕು—ಅಂತ ಶಬ್ದ ಕೇಳಿಸಿತು. ಏನದು ಹೇಳು!

(ಮಲ್ಲ ಸುಮ್ಮನೇ ನಿಲ್ಲುವನು)

**ಭೀಮರಾಯ :** ಹೂಂ, ಹೋಗಲೇ ಲಗೂನs. (ಹೊರಡುವನು)

**ಶಾಮರಾಯ :** ಬಾರಲೇ ಇಲ್ಲೆ. (ಬರುವನು)

**ಮಲ್ಲ :** ಎಪ್ಪಾ ನಾ, ದೊಡ್ಡರಾಯರ ಅನ್ನಾ ಉಂಡು ಅವರ ಮನೀ ಬಾಗಲದಾಗ ಬಿದ್ದುಕೊಂಡಿರೋ ನಾಯಿರಿ! ಹೀಂಗ ನೀವs ಇಬ್ಬರೂ ಕಚ್ಯಾಡಿದರ, ನಾ ಏನು ಮಾಡಬೇಕರಿ?

**ಭೀಮರಾಯ :** (ಅವನೆಡೆಗೆ ಬಂದು) ದೊಡ್ಡರಾಯರ ತರುವಾಯ ನಾನs ಈ ಮನಿಗೆ ಯಜಮಾನ ಅನ್ನೋದು ನಿನಗ ಗೊತ್ತಿಲ್ಲೇನಲೇ? ದೊಡ್ಡರಾಯರು ನನ್ನ ಮಗನ್ನs ದತ್ತಕ ತಗೊಂಡಾರ. ಈ ಮಾತು ನಿನಗ ತಿಳಿದಿರಲಿ. (ಮಲ್ಲನು ತಲೆ ಅಲ್ಲಾಡಿಸುವನು.) ಅಂದಮ್ಯಾಲ, ಈಗ ನಾ ಹೇಳಿದ್ಹಾಂಗ ನೀ ಕೇಳಬೇಕು.

**ಶಾಮರಾಯ :** ಅದೆಲ್ಲಾ ಸುಳ್ಳು. ನಾನು ದೊಡ್ಡರಾಯರ ಖಾಸಾ ತಮ್ಮ ತಿಳೀತs? ಖಾಸs ತಮ್ಮನ ಮಗನ್ನ ದತ್ತಕ ತಗೊಳ್ಳದs, ಹೇಣತೀ ತಮ್ಮನ ಮಗನ್ನ ಯಾರಾದರೂ ದತ್ತಕ ತಗೋತಾರೇನು? ಈ ಮನಿಗೆ, ಈಗ ನನ್ನ ಮಗಾ, ಅಂದರ ನಾ, ವಾರಸ್‌ದಾರ! ನೀ ಈ

ಮನೀ ಆಳುಮನಸ್ಯಾ. ಅಂದಮ್ಯಾಲ ನಾ ಹೇಳಿದ್ಹಾಂಗ ಕೇಳೋದು ನಿನ್ನ ಕೆಲಸ....ಕೆಲಸೇನು ನಿನ್ನ ಕರ್ತವ್ಯ. ತಿಳೀತs (ಮಲ್ಲನು ತಲೆ ಹಾಕುವನು) ಅದಕ್ಕs ಇಲ್ಲಿ ಬಾ! ಅರ್ಜೆಂಟ್ ಒಂದು ಕೆಲಸಾ ಹೇಳೋದದs.

[ಮಲ್ಲ ನಿಂತಲ್ಲೇ ನಿಲ್ಲಲು, ಅವನ ರಟ್ಟೆ ಹಿಡಿದು ಜಗ್ಗುತ್ತ] ಇತ್ತ ಬಾರಲೇ!

ಭೀಮರಾಯ : (ತಾನೂ ಮಲ್ಲನ ಇನ್ನೊಂದು ರಟ್ಟೆ ಹಿಡಿದು ಜಗ್ಗುತ್ತ) ಇತ್ತ ಬಾರಲೇ ಮಗನs! ನಾ ಹೇಳಿದ ಕೆಲಸಾ ಮೊದಲ ಮಾಡು!

ಮಲ್ಲ : ಇವರು ಇತ್ತ ಎಳಿಯುವಾಗ ನಾ ಹ್ಯಾಂಗ ಬರಬೇಕರಿ ಅತ್ತs?

ಭೀಮರಾಯ : ಶಾಮರಾಯಾ, ಅವನ ರಟ್ಟೀ ಬಿಡು.

ಶಾಮರಾಯ : ಬಿಡೋದಿಲ್ಲ. ಯಾಕs ಅಂವೇನು ನಿಮ್ಮಪ್ಪನ ಮನೀ ಆಳೇನು?

ಭೀಮರಾಯ : ನಮ್ಮಪ್ಪನ ಮನೀ ಆಳಲ್ಲ. ನನ್ನ ಮನೀ ಆಳು!

ಶಾಮರಾಯ : ಇದು ನಿನ್ನ ಮನೀsನs? ಇದು ದೊಡ್ಡರಾಯರ ಮನೀ....ದೊಡ್ಡರಾಯರದು!

ಮಲ್ಲ : ಬಾಳ ಕರೇವ ಹೇಳಿದ್ರಿ ನೋಡ್ರಿ.

ಭೀಮರಾಯ : (ಸಿಟ್ಟಿನಿಂದ) ಮುಚ್ಚಲೇ ಬಾಯಿ! ಇಷ್ಟರಾಗs ಅವನ ಕಡೆ ಆದ್ಯೇನು?

ಶಾಮರಾಯ : ಆಗದೇನು? ಇದು ನನ್ನ ಮನೀ ಅಂದಮ್ಯಾಲ ಅಂವ ನನ್ನ ಆಳು ಮನಸ್ಯಾ ಆಗತಾನ.

ಭೀಮರಾಯ : ಇದು ನಿನ್ನ ಮನೀನs? ಯಾಂವ ಹೇಳಾಂವ! ಇದು ದೊಡ್ಡರಾಯರ ಮನೀ!

ಮಲ್ಲ : ಹೌದರೀ ಯೆಪ್ಪಾ! ಈಗ ನೀವೂ ಭಾಳ ಕರೇವು ಹೇಳಿದಿರಿ ನೋಡ್ರಿ!

ಶಾಮರಾಯ : (ಸಿಟ್ಟಿನಿಂದ) ಮುಚ್ಚಲೇ ಬಾಯಿ. ಇದು ನನ್ನ ಮನಿ ಅದ. ದೊಡ್ಡರಾಯರದಲ್ಲ.

**ಭೀಮರಾಯ :** ನಿನ್ನದೂ ಅನ್ನ ಬ್ಯಾಡ. ನಿನ್ನದೂ—ಅಂದೀ ಅಂದರs, ನಿನ್ನ ನಾಲಗೀನs ಸೀಳೇನು?

**ಶಾಮರಾಯ :** ನೀ ನಾಲಿಗೀ ಸಿಳೋದ್ರಾಗs ನಿನ್ನ ತಲೀನs ಒಡೀತೇನು ನಾನು! (ಕೈಯಲ್ಲಿಯ ಬಡಿಗೆಯನ್ನು ಎತ್ತುವನು) ಇಂಥಾ ದಾಂಡ ಗಾಯಿತನಾ ನನ್ನ ಮುಂದ ನಡಿಯೂದಿಲ್ಲ; ನಿನ್ನ ಫೌಜದಾರಕೀ ಎಲ್ಲಾ ಆ ಪ್ಯಾದೇಗೋಳ ಮುಂದs! ಈ ಮಾಮಲೇದಾರನ ಮುಂದ ನಿನ್ನ ಆಟ ನಡ್ಯೋ ಹಾಂಗಿಲ್ಲ. ಸುಮ್ಮನs ಈ ಮಲ್ಲ್ಯಾನ ಕೈಬಿಡು.

**ಭೀಮರಾಯ :** ಬಿಡೂದಿಲ್ಲ. ನೀ ಏನ ಮಾಡಾಂವಾ? ನಿನ್ನಂಥಾ ಪಿಂಚಣೀ ಮಾಮಲೇದಾರರಿಗೆ ಹೆದರೋ ಫೌಜದಾರ್ ಅಲ್ಲ ನಾ. ಹೆಚ್ಚು-ಕಡಿಮಿ ಮಾತಾಡಿದರ ಗುಂಡ ಹಾಕಿಬಿಡಾಂವ—ನಾ. ತಿಳೀತs? ಇಲ್ಲೀ ತನಕಾ ದೊಡ್ಡರಾಯರ ತಮ್ಮಾ ಅಂತ ತಾಳಿದೆ. ಏ ಮಲ್ಲ್ಯಾ, ನಾ ಹೇಳತೇನಿ— ನೀ ಒಳಗ ಹೋಗಿ ಆ ಬಂದೂಕು ತಗೊಂಡ್ ಬಾ (ಅವನನ್ನು ಎಳೆಯುವನು.)

[ಕಲ್ಲಂಭಟ್ಟರು ಪ್ರವೇಶಿಸುವರು]

**ಕಲ್ಲಂಭಟ್ಟರು :** ಎಲಾ! ಎಲಾ! ಇದೇನು? ಏನ ನಡಿಸೀರಿ ಇದನ್ನs? ಈ ಮಲ್ಲ್ಯಾನ ರಟ್ಟೀ ಹಿಡಕೊಂಡು ಯಾಕ ನಿಂತೀರಿ? ಒಬ್ಬರು ಬಡಿಗೀ ಎತ್ತೀದೀರಿ. ಒಬ್ಬರು ಬೆತ್ತಾ ಹಿಡದೀರಿ. ಅಂವ ಏನಾದ್ರೂ ಕಳವು-ಗಿಳವು ಮಾಡ್ಯಾನೇನು ಮತ್ತs? ಅಲ್ಲಾ ದೊಡ್ಡರಾಯರು ಹೋದರೂ ಅಂತ, ಯಾರೋ ಸುದ್ದೀ ಹೇಳಿದರು; ಅದನ್ನ ಕೇಳಿ ಘಾಬರಿ ಆಗಿ ನಾ ಓಡಿ ಬಂದೆ. ಆದರೆ ಇಲ್ಲೆ ಏನೋ ಕುರುಕ್ಷೇತ್ರನs ನಡದsದಲ್ಲಾ, ಏನಿದು ಎಲ್ಲಾ ರಾಯರs?

[ಇಬ್ಬರೂ ಮಲ್ಲನ ಕೈಬಿಟ್ಟು ದೂರ ಸರಿದು ನಿಲ್ಲುವರು.]

**ಮಲ್ಲ :** (ಭಟ್ಟರ ಕಾಲಿಗೆ ಬಿದ್ದು) ಯೆಪ್ಪಾ, ಒಳೇ ಹೊತ್ತಿಗೆ ಬಂದ್ರಿ ನೀವು— ದೇವರು ಬಂದ್ಹಾಂಗs. ಇಲ್ಲದಿದ್ದರs ಇಲ್ಲೆ ಎರಡು ಹೆಣಾ ಬೀಳತಿದ್ದೂರಿ ಇಂದ.

**ಕಲ್ಲಂಭಟ್ಟರು :** (ಚಕಿತರಾಗಿ) ಏನೋ ಮಲ್ಲ್ಯಾ, ನೀ ಹೇಳೋ-ದಾದರೂ ಏನು? ದೊಡ್ಡರಾಯರ ಮನ್ಯಾಗ ಹೆಣಾಬೀಳತಾವ?

**ಮಲ್ಲ :** (ಅಳುತ್ತ) ಹೌದರೀ ಎಪ್ಪಾ, ಹೌದು!

**ಕಲ್ಲಂಭಟ್ಟರು :** ಯಾರು ಕಲೆಕ್ಟರು ಆಗಿ ಈ ನಾಡಿಗೆಲ್ಲಾ ಹಿರೇ ಸಿದ್ರೋ, ಯಾರು ಎಲ್ಲಾರ ಕಡಿಂದ ರಾವ್‌ಬಹಾದ್ದೂರ್ ಅಂತ ಅನಿ ಕೊಂಡಿದ್ದರೋ, ಯಾರು ಬಂದವರನ್ನ ಬರಿಗೈಲೇ ಕಳಸ್ತಿರಲಿಲ್ಲೋ, ಯಾ ಅನಾಥರಿಗೆ ರಕ್ಷಕ ಅನಿಸಿದ್ದರೋ, ಅಂಥಾ ದೊಡ್ಡರಾಯರ ಮನ್ಯಾ ಅವರು ಸತ್ತು ಇನ್ನೂ ತಿಂಗಳು ಆಗೂದರೊಳಗs—ಎರಡು ಹೆ ಬೀಳತಾವs ?

**ಭೀಮರಾಯ :** ಹೌದು ಭಟ್ಟರs, ಎರಡಲ್ಲ....ನಾಲ್ಕು ಹೆ ಬೀಳತಾವ ಇಂದ.

**ಶಾಮರಾಯ :** ಹೌದು, ಭಟ್ಟರs ನಾಲ್ಕಲ್ಲ ಎಂಟು ಹೆಣಾ ಬೀ ತಾವ....ಎಂಟು.

[ಮಲ್ಲನು ಮೆಲ್ಲನೇ ಅಲ್ಲಿಂದ ಜಾರುವನು.]

**ಕಲ್ಲಂಭಟ್ಟರು :** (ಉದ್ವೇಗದಿಂದ) ಯಾಕದು ? ಯಾಕ ಬೀ ತಾವ ಹೆಣಾ ?

**ಭೀಮರಾಯ :** ಯಾಕಂದರs ದೊಡ್ಡರಾಯರ ವಂಶಾ ಉ ಲಿಕ್ಕೆ !

**ಶಾಮರಾಯ :** ಅಲ್ಲ! ಅವರ ಆಸ್ತೀ ನುಂಗೋದನ್ನ ಬಿಡಿಸಲಿ

**ಕಲ್ಲಂಭಟ್ಟರು :** ಅಲ್ಲಾ ನೀವು ಅನ್ನೂದೇನು ? ನನಗ ಒಂ ಅರ್ಥ ಆಗವೊಲ್ಲದು! ರಾಯರs ಏನ ನಡದsದ ಇಲ್ಲೇ ?

**ಶಾಮರಾಯ :** ಠಕ್ಕತನಾ ನಡದದs....ಠಕ್ಕತನಾ.

**ಭೀಮರಾಯ :** ಠಕ್ಕತನಾ ಅಲ್ಲಾ, ದರೋಡೆ ನಡದsದ ದರೋಡೆ.

**ಕಲ್ಲಂಭಟ್ಟರು :** ರಾಯರs ಸ್ವಲ್ಪ ಶಾಂತಚಿತ್ತರಾಗಿ ಇಬ್ಬ ಇಲ್ಲೆ ಕೂಡ್ರಿ. ಆದದ್ದಾದರೂ ಏನು ಅನ್ನೋದನ್ನ ನನಗೂ ಒಂ ಸ್ವಲ್ಪ ಹೇಳ್ರಿ. ನಾನೂ ದೊಡ್ಡರಾಯರ ಮನೀ ಅನ್ನಾ ಉಂಡಾಂವ. ಅವರು ಹೋದರೂ ಅಂತ ಅವರ ಮನಿ ಹಾಳಾಗಬಾರದೂ ಅನ್ನೋ

ವಿಚಾರದಾಂವಾ. ಅದಕ್ಕs ನಡದದ್ದಾದರೂ ಏನು ಅನ್ನೋದನ್ನ ಸ್ವಲ್ಪ ಹೇಳ್ರಿ! ಅದೆಲ್ಲಾ ಬಿಟ್ಟು ಬರೀ 'ಹೆಣಾಬೀಳತಾವ—ಹೆಣಾಬೀಳತಾವ' ಅಂದ್ರು? ಸುಮ್ಮಸುಮ್ಮನs ಹೆಣಾ ಯಾಕ ಬೀಳತಾವ? ದೊಡ್ಡ ರಾಯರ ಅನ್ನಾ ಉಂಡಂಥಾ ನಾನು ಮತ್ತs ಈ ಮಲ್ಲ್ಯಾ ಜೀವಂತ ಇರೋ ತನಕಾ, ದೊಡ್ಡರಾಯರ ಮನ್ಯಾಗ ಹೆಣಾಬೀಳೋ ಹಾಂಗಿಲ್ಲ, ತಿಳೀತs? ಅದಕs ಈ ಜಗಳ ಹಾಂಗs ಮುಗಿತದೇನೋ ನೋಡೋಣ. ಭೀಮ-ರಾಯರ, ನೀವು ಇಲ್ಲೆ ಬರ್ರಿ. ಇತ್ತಕೂಡ್ರಿ. (ಕುರ್ಚಿ ತೋರಿಸುವನು) ಶ್ಯಾಮುರಾಯರs, ನೀವೂ ಇತ್ತ ಬರ್ರಿ. ಇಲ್ಲೆಕೂಡ್ರಿ (ಕುರ್ಚಿ ತೋರಿಸುವನು). (ಅತ್ತಿತ್ತ ನೋಡಿ) ಮಲ್ಲ್ಯಾ, ಏ ಮಲ್ಲ್ಯಾ! ಎಲಾ ಇವನ! ಎಲ್ಲೋ ಜಾರಿ ಕೊಂಡು ಹೋದ್ನಲಾ ಇಂವ ಇಷ್ಟರಾಗs! ಇರಲಿ (ಇಬ್ಬರೂ ಕುಳಿತು ಕೊಳ್ಳುವರು).

(ಭಟ್ಟರೂ ನಡುವೆ ಒಂದು ಕುರ್ಚಿ ಇಟ್ಟುಕೊಂಡು ಕುಳಿತುಕೊಳ್ಳುವರು.)

**ಶಾಮುರಾಯ :** ಭೀಮರಾಯಾ, ನೀ ಹೇಳೋದೇನದ ಅದನ್ನ ಈಗ ಕಲ್ಲಂಭಟ್ಟರ ಮುಂದ ಒಮ್ಮೆ ಹೇಳಿಬಿಡು.

**ಭೀಮರಾಯ :** ಅದೇನಿಲ್ಲ; ನೀನs ಏನು ಹೇಳೋದು ಹೇಳಿ ಬಿಡು.

**ಶಾಮುರಾಯ :** (ವಿಚಾರಿಸಿ) ನೋಡು ಹಾಂಗಾದರ, ನಾ ಹೇಳು-ವಾಗ ನೀ ನಡುವ ಬಾಯಿ ಹಾಕಬಾರದು!

**ಭೀಮರಾಯ :** ಇಲ್ಲಪಾ. ನಿಂದು ಮುಗಿಯೋ ವರಿಗೂ ಬಾಯಾಗ ತಂಬಾಕ ಹಕ್ಕೊಂಡು ಕೂತಿರತೀನಿ....ಆತs?

(ಚಂಚಿಯನ್ನು ಬಿಚ್ಚುವನು.)

**ಶಾಮುರಾಯ :** [ನಸ್ಯವನ್ನು ತೆಗೆದು ಭಟ್ಟರ ಮುಂದೆ ಹಿಡಿಯುವನು. ಭಟ್ಟರು ಒಂದು ಚುಟುಕಿ ಹಾಕಿಕೊಂಡ ಮೇಲೆ ತಾನೂ ಏರಿಸಿ] ಈಗ ಎರಡು ತಿಂಗಳ ಹಿಂದ, ರಾಯರು ನಮ್ಮನ್ನ ಕರಿಸಿಕೊಂಡ್ರು. ಆಗ ನೀವು ಊರಾಗ ಇರಲಿಲ್ಲ.

**ಕಲ್ಲಂಭಟ್ಟರು :** ಹೌದು. ನಾನು ರಾಮೇಶ್ವರಕ್ಕೆ ಹೋಗಿದ್ದೆ. ಈಗ ಎರಡು ತಿಂಗಳು ನಾನು ಊರಲ್ಲಿರಲಿಲ್ಲ!

ಶಾಮರಾಯರು : 'ನಂದೂ ಏನ ನೇಮ ಇಲ್ಲಪಾ. ಅದಕ ಬದರೀಯಾತ್ರಿ ಮಾಡಿ ಬರತೀನಿ' ಅಂತ ಹೇಳಿದರು. ನಾ ಆಗ 'ನಿಮಗ ವಯಸ್ಸಾಗೇದ, ಹೋಗಬ್ಯಾಡ್ರಿ' ಅಂತ ಹೇಳಿದೆ. ಆದರೂ ಅವರು ನನ್ನ ಮಾತು ಕೇಳದs ಹೊರಟs ಬಿಟ್ರು. ಕಾಶಿಗೆ ಮೊದಲು ಹೋಗಿ ಅಲ್ಲಿಂದ ಬದರಿಗೆ ಹೋಗುವವರಿದ್ದರು. ಆದರ ಅವರು ಕಾಶೀ ಮುಟ್ಟಿದ ಎರಡ್ನೇ ದಿವಸಕ್ಕ 'ಗಂಗಾನದೀ ಒಳಗ ನಾವು ಮುಣಿಗಿ ದೊಡ್ಡರಾಯರು ತೀರಿ ಕೊಂಡರು' ಅಂತ ತಾರು ಬಂತು. (ಗದ್ಗದಿತನಾಗಿ) ನಾವೆಲ್ಲಾ ಒಮ್ಮೆಲೇ ಪರದೇಶಿ ಆದೆವು. ನಮಗೆಲ್ಲಾ ಎಷ್ಟು ದುಃಖಾತು ಅನ್ನೋದನ್ನ ಬಾಯಿಲೇ.... (ಕಣ್ಣೀರು ಸುರಿಸುವನು. ಕ್ಷಣಹೊತ್ತು ಮೌನ, ಆ ಮೇಲ ಕಣ್ಣೀರು ಒರೆಸಿಕೊಂಡು) ಹೋದವರು ಪುಣ್ಯವಂತರಾಗಿ ಹೋಗತಾರ. ಇದ್ದವರಿಗೆ ಸಂಸಾರ ನಡೆಸೋದು ಬಿಟ್ಟದ್ದಲ್ಲಲಾ! ಅದಕ್ಕs ಈಶ್ವರನ ಇಚ್ಛಾಕ ಯಾರೇನು ಮಾಡೋದsದ ಅಂತ ಮನಸ್ಸು ಕಲ್ಲುಮಾಡಿಕೊಂಡು, ನಮ್ಮ ಸದಾಶಿವನ ಕಡಿಂದ ದಿನಕರ್ಮ ಮಾಡಿಸಿದೆ.

ಕಲ್ಲಂಭಟ್ಟರು : ಸದಾಶಿವನ ಕಡಿಂದs ಯಾಕ ದಿನಕರ್ಮಾ ಮಾಡಿಸಿದಿರಿ ?

ಶಾಮರಾಯ : ಅಂದ್ಹಾಂಗ ನಿಮಗೆ ಹೇಳಲಿಕ್ಕೆ ಮರೆತs ಬಿಟ್ಟೆ ನೋಡ್ರಿ. ದೊಡ್ಡರಾಯರು ಬದರಿಗೆ ಹೋಗೋಕಿಂತಾ ಮೊದಲs ನನ್ನ ಚಿರಂಜೀವನಾದ ಸದಾಶಿವನ್ನ ದತ್ತಕಮಾಡಿಕೊಂಡು, ತಮ್ಮ ಮನೀ ದೀಪ ಆರದ್ಹಾಂಗ ಮಾಡಿ ಹೋಗ್ಯಾರ.

ಕಲ್ಲಂಭಟ್ಟರು : ಹೀಂಗs? ಭಾಳ ಛಲೋ ಆತು ಬಿಡ್ರಿ. ಮುಂದ?

ಭೀಮರಾಯರು : (ತಂಬಾಕಿನ ಬಾಯಿಂದ) ಇಳ್ಳಾ. ಇಳ್ಳಾ. (ಎನ್ನುತ್ತ ಕಿಡಕಿಯ ಬದಿಗೆ ಎದ್ದು ಹೋಗಿ ತಂಬಾಕು ಉಗುಳಿ ಬರುತ್ತ) ಅದೆಲ್ಲಾ ಸುಳ್ಳದs ಭಟ್ಟರs, ಸುಳ್ಳದs.

ಶಾಮರಾಯ : ನೀ ನಡುವ ಬಾಯಿಹಾಕಬ್ಯಾಡ. ನೀ ಸುಮ್ಮನs ಕೂಡತೇನಂದಲ್ಲೆನs ನಾ ಹೇಳಿದೆ.

ಕಲ್ಲಂಭಟ್ಟರು : ಭೀಮರಾಯರ, ಸ್ವಲ್ಪ ತಡೀರಿ! ಅವರದೆಲ್ಲಾ ಮೊದಲ ಒಮ್ಮೆ ಮುಗೀಲಿ; ಆ ಮ್ಯಾಲ ನೀವೂ ಹೇಳುವಂತಿರಿ.

ಭೀಮರಾಯ : ಆಗಲಿ. ಆಗಲಿ, (ಎನ್ನುತ್ತ ಮತ್ತೆ ಚಂಚೀ ಬಿಚ್ಚುವನು).

ಕಲ್ಲಂಭಟ್ಟರು : ಹಂ! ಮುಂದೇನಾತು?

ಶಾಮರಾಯ : ಈಗ ನೀವು ನೋಡಿದಿರೆಲ್ಲಾ.... ಈ ಭೀಮರಾಯನ ದಾಂಡಗಾಯಿತನಾ? ಅದs ಆತು! ನಾನು ಮಂದಿನ್ನೆಲ್ಲಾ ಊರಿಗೆ ಕಳಿಸಿ, ರಾಯರ ಆಸ್ತೀ ಕಬಜಾ ತಗೊಂಡು ಒಂದು ವ್ಯವಸ್ಥಾ ಮಾಡಬೇಕು— ಅಂತ ನಿಂತೆ. ಆಗ ಇಂವಾ ಅಡ್ಡಬಂದು, ನನ್ನ ಹೊರಗೆ ಹಾಕಲಿಕ್ಕೆ ನಿಂತಾನ. ನೀವಾದರೂ ಇಂವಗ ಸ್ವಲ್ಪ ಬುದ್ಧೀ ಹೇಳಿರಿ.

[ಭೀಮರಾಯ ಮತ್ತೆ ಎದ್ದು ತಂಬಾಕು ಉಗಳಿ ಬಂದು]

ಭೀಮರಾಯ : ಮುಗೀತಿಲ್ಲಪಾ ನಿನ್ನ ಪುರಾಣಾ?

ಶಾಮರಾಯ : ಮುಗೀತು ಬಾ.

ಭೀಮರಾಯ : ಇನ್ನ—ನಾ ಅಷ್ಟು ಹೇಳೋತನಕಾ ಮೂಗಿನಾಗ ನಸ್ಯಾ ತುಂಬಿಕೊಂಡು ಸುಮ್ಮನs ಕೂಡು.

ಶಾಮರಾಯ : ಆಗಲಿ, ನಿಂದೂ ಹೂರಣ ಒಮ್ಮೆ ಹೊರಬೀಳಲಿ!

ಭೀಮರಾಯ : ಕಲ್ಲಂಭಟ್ಟರs, ನೀವು ಹ್ಯಾಂಗಾದರೂ ದೊಡ್ಡ ರಾಯರಮನೀ ಪುರೋಹಿತರು. ಅವರ ಮನಿತನದ ಹಿತಾಹಿತಗಳನ್ನ ನೋಡವರು. ಅಂದವ್ಯಾಲ ನಾ ಹೇಳೊದಷ್ಟು ಕೇಳ್ರಿ! ಇದರಾಗ ಖರೇ ಯಾವುದು, ಖೊಟ್ಟಿಯಾವುದು ಅನ್ನೋದನ್ನ ನೀಂವs ನಿರ್ಣಯಮಾಡಿ ಹೇಳಿರಿ!

ಶಾಮರಾಯ : ಇದೆಲ್ಲಾ ಬರೀ ರಗಳೇ ಆತಲಾ— ಮುಖ್ಯ ವಿಷಯ ಮೊದಲ ಹೇಳು.

ಭೀಮರಾಯ : ಏ ಶ್ಯಾಮರಾಯಾ, ನೀ ನಡುವ ಬಾಯಿ ಹಾಕ ಲಿಕ್ಕೆ ಬರಬ್ಯಾಡ.

ಕಲ್ಲಂಭಟ್ಟರು : ಶಾಮರಾಯರs, ನೀವು ಸ್ವಲ್ಪ ತಾಳಿರಿ. ನೀವು ಈಗ ಹೇಳಿದಿರಿ; ಇನ್ನ ಇವರಿಗೆ ಹೇಳಲಿಕ್ಕೆ ಅವಕಾಶ ಕೊಡ್ರಿ.

ಶಾಮರಾಯ : ಆಗಲಿ, ಆಗಲಿ!

ಭೀಮರಾಯ : ಭಟ್ಟರs, ನೀವು ಊರಿಗೆ ಹೋದ ಮ್ಯಾಲ, ದೊಡ್ಡ ರಾಯರು ಬದರೀಯಾತ್ರೆಗೆ ಒಮ್ಮೆಲೇ ಹೊರಟುನಿಂತರು. ಆಗ ನನ್ನ ಬ್ಯಾರೇ ಬದಿಗೆ ಕರದು, "ನೋಡು ಭೀಮರಾಯಾ, ನಾ ಅಂತೂ ಈಗ ಬದರೀಯಾತ್ರೆಗೆ ಹೊಂಟೇನಿ. ಬದರಿಗೆ ಹೋಗಿ ಸುರಕ್ಷಿತ ಮರಳಿ ಬಂದೇನು ಅನ್ನೋ ಭರೋಸಿಲ್ಲ ನನಗ. ಮತ್ತ ಆಕೀ ಮನಸ್ಸಿನಾಗ ನಿನ್ನ ಮಗನ್ನ ದತ್ತಕ ತಗೋಬೇಕು ಅಂತ ಇತ್ತು. ಹಾಂಗ ನನ್ನ ಕಡಿಂದ ವಚನ ತಗೊಂಡು ಆಕೆ ಕಣ್ಣು ಮುಚ್ಚ್ಯಾಳ. ಅದಕ್ಕ ನಿನ್ನ ಚಿರಂಜೀವನಾದ ಶಂಕರನನ್ನ ನಾ ದತ್ತಕ ಮಾಡಿಕೊಂಡು ಹೋಗತೇನಿ" ಅಂತ ಹೇಳಿ, ನನ್ನ ಮಗನ್ನ ದತ್ತಕ ಮಾಡಿಕೊಂಡು ಹೋದರು. ಮತ್ತ ಅವರು ಅವಸರದೊಳಗ ಇದ್ದರೂ ಅಂತ, ಅವಸರಲೇ ಧಾರ್ಮಿಕವಿಧಿ ಅಷ್ಟs ಮುಗೀತು. ಫೋಟೋ ವಗೈರೆ ಲೌಕಿಕವಿಧಿ ಮಾಡಲಿಲ್ಲ. ಇಲ್ಲದಿದ್ದರ ನಾ ಫೋಟೋ ತಂದು ತೋರಸ್ತಿದ್ದೆ.

ಕಲ್ಲಂಭಟ್ಟರು : ಫೋಟೋ ಏನು ಮಹತ್ತ್ವದ್ದಲ್ಲ. ಮುಂದೇನಾತ್ಯು ಹೇಳ್ರಿ.

ಭೀಮರಾಯ : ದಿನಕರ್ಮಾ ಎಲ್ಲಾ ಮಾಡಿ, ಬಂದ ಮಂದಿನೆಲ್ಲಾ ಊರಿಗೆ ಕಳಿಸಿ, ದೊಡ್ಡರಾಯರ ಈ ದೊಡ್ಡ ಆಸ್ತಿ ಒಂದು ವ್ಯವಸ್ಥೆಕ್ಕ ತರಬೇಕು ಅಂದ್ರು, ಈ ಶ್ಯಾಮರಾಯಾ ನನ್ನ ಹೊರಗ ಹಾಕಲಿಕ್ಕೆ ಈ ನಾಟಕಾ ಹೂಡ್ಯಾನ ಅಂದರ, ನಾ ಹೊರಗ ಹೋಗಿ ಇವನ ಮ್ಯಾಲ ದಾವೆಮಾಡಿ, ಕೋರ್ಟು ಕಚೇರಿ ಅಂತ ಹೊಲಾಮನಿ ಮಾರಿಕೊಂಡು ಹುಚ್ಚಾಗಿ ಹೋಗಬೇಕು. ತಾ ಮಾತ್ರ ರಾಯರ ಆಸ್ತಿ ಕಬಜಾ ತಗೊಂಡು, ಎಲ್ಲಾ ತನ್ನ ಮನೀ ತುಂಬಿಕೋಬೇಕು—ಅಂತ ಲೆಕ್ಕಾ ಹಾಕ್ಯಾನ. ಅಲ್ಲದು ಭಟ್ಟರs, ಈಗ ಮನ್ಯಾಗ ಇದ್ದದ್ದೆಲ್ಲಾ ಬಳಕೊಂಡು ತಮ್ಮೂರಿಗೆ ಕಳಿಸ್ಯಾನೀಗ !

ಶಾಮರಾಯ : (ಉದ್ರಿಕ್ತನಾಗಿ) ಸುಳ್ಳು ಭಟ್ಟರ ! ಇದೆಲ್ಲಾ ಸುಳ್ಳದs ! ಇಂಥಾ ಸುಳ್ಳು ಕಥೀ ಹೇಳಿದರ ಜನಾ ಮಳ್ಳಾಗತಾರೇನು! (ಎದ್ದು ನಿಲ್ಲುವನು).

ಭೀಮರಾಯ : ಇಲ್ಲಾ, ನಿನ್ನ ಕಟ್ಟು ಕಥಿ ಮಾತ್ರ ಖರೇ ಅಂತ ನಂಬತಾರಲ್ಲs ಜನರು ? (ಎದ್ದು ನಿಲ್ಲುವನು).

ಕಲ್ಲಂಭಟ್ಟರು : (ತಾವೂ ಎದ್ದು) ಶ್ಯಾಮರಾಯಾ, ಭೀಮರಾಯಾ, ಇಬ್ಬರೂ ಶಾಂತ ಆಗಿರಿ. ಮಾಮಲೇದಾರ ಆಗಿ, ಫೌಜದಾರ ಆಗಿ, ಎಲ್ಲಾರ ಕಡಿಂದ ಹೌದು ಅನಿಸಿಗೊಂಡು, ಪಿಂಚಣಿ ಪಡೆದ ನೀವು, ಈಗ ಹಳ್ಳೀ ಹುಂಬರ್ಹಾಂಗ ಬಡಿದಾಡೋದು ನನಗೇನು ಸರಿ ಕಾಣೂದಿಲ್ಲ. ನೀವು ಹೇಳಿದ್ದನ್ನ ಕೇಳಿದರ, ಇದರೊಳಗ ಯಾರು ಖರೇ ದತ್ತಕ ಕೊಟ್ಟವರು ಅನ್ನೋದನ್ನ ನಿಂತಕಾಲವ್ಯಾಲ ಹೇಳಲಿಕ್ಕೆ ಬರೂದಿಲ್ಲ. (ವಿಚಾರಿಸಿ) ಅದಕ್ಕs ನಾ ಒಂದು ಹಾದೀ ಹೇಳತೇನಿ....ಹಾಂಗ ಮಾಡಿದರ, ಈಗ ಎಲ್ಲಾರಿಗೂ ಕ್ಷೇಮ ಆಗತsದ.

ಶಾಮರಾಯ : ಅದು ನಮಗನುಕೂಲ ಇದ್ದರ ಏನೂ ಅಡ್ಡಿ ಇಲ್ಲ.

ಭೀಮರಾಯ : ಹೌದು, ನನಗೂ ಅನುಕೂಲ ಇದ್ದರ, ನಾ ಏನೂ ಬ್ಯಾಡ ಅನ್ನೂದಿಲ್ಲ.

ಕಲ್ಲಂಭಟ್ಟರು : ಈಗ ರಾಯರ ಈ ಮನಿಗೆ ಇಬ್ಬರೂ ನಿಮ್ಮ ನಿಮ್ಮ ಕೀಲಿ ಹಾಕಿರಿ. ನಿಮ್ಮ ಕೀಲೀಕೈ ನಿಮ್ಮ ಕಡೆಗೇ ಇರಲಿ. ನಾಳೆ ಕೋರ್ಟಿನೊಳಗ ಯಾರಂತs ನಿರ್ಣಯ ಆಗತsದೋ ಅವರು ಕಬಜಾ ತಗೊಳ್ರಿ.

ಶಾಮರಾಯ : ಕೈಗೆ ಬಂದ ಆಸ್ತೀ ಹೀಂಗ ಫುಕಟ ಬಿಟ್ಟು ಬಿಡಲಿಕ್ಕೆ ನಾ ಸುಮ್ಮನs ಮೂವತ್ತು ವರುಷ ಮಾಮಲೇದಾರಿಕೀ ಮಾಡಿಲ್ಲ!

ಭೀಮರಾಯ : ಮತ್ತ....ನಾ ಫೌಜದಾರಿಕೀ ಫುಕಟ ಮಾಡಿದೇನಂತ ತಿಳಕೊಂಡೇನು? ಫೌಜದಾರ ಇದ್ದಾಗ ಎಂಥೆಂಥಾ ದಕ್ಕದ ಆಸ್ತಿ ಕಬಜಾ ಕೊಡಿಸಿ ದಕ್ಕಿಸೀದೇನು. ಈಗ ಅನಾಯಾಸ ಕೈಗೆಬಂದ ಆಸ್ತೀ ಕಬಜಾ ಬಿಡಲ್ಯಾ? ಭಟ್ಟರ, ಈ ಮನಿಗೆ ಕೀಲಿ ಹಾಕೋ ಮಾತ ಬಿಟ್ಟು ಮತ್ತೇನಾದರೂ ಇದ್ದರ ಹೇಳ್ರಿ!

ಕಲ್ಲಂಭಟ್ಟರು : (ಉಸಿರು ಬಿಟ್ಟು) ರಾಯರ, ನಿಮ್ಮ ಮುಂದ ನಾ ಹೇಳೋದೆಲ್ಲಾ ಮುಗೀತು. ಇನ್ನ ಆ ದೇವರಿಗೇ ಹೇಳಬೇಕಾಗೇದ. (ಉಸಿರ್ಗರೆದು) ಆಗಲಿ. ದೊಡ್ಡರಾಯರ ಪುಣ್ಯಾನs ಮುಗದ್ಹಾಂಗ ಕಾಣಸ್ತsದ ಅಂದವ್ಯಾಲ, ನಾ ಅರೇ ಏನು ಮಾಡಾಂವ? ದೇವರ ಇಚ್ಛಾ ಇದ್ಹಾಂಗ ಆಗಲಿ. (ಒಮ್ಮೆಲೇ ಗಂಭೀರರಾಗಿ) ಆದರ ಒಂದು ಮಾತು: ಇಬ್ಬರೂ ಈ ಮನ್ಯಾಗ ಕೂಡಿ ಇರಲಿಕ್ಕೆ ನನ್ನದೇನೂ ಅಡ್ಡಿ ಇಲ್ಲ. ದೊಡ್ಡ

ರಾಯರ ಈ ದೊಡ್ಡ ಮನ್ಯಾಗ ರಕ್ತಪಾತ ಆಗೋಹಾಂಗಿಲ್ಲ; ಬಡಿದಾಟಾ ಹೊಡದಾಟಾ ನಡೆಯೋ ಹಾಂಗಿಲ್ಲ! ಹಾಂಗೇನಾದರೂ ನಿಮ್ಮ ವಿಚಾರಿದ್ದರ ಹೇಳಿಬಿಡ್ರಿ. ನಾ ಇಲ್ಲೇ ಕೂತೇ ಬೀಡಶೇನಿ. ನಾನೂ ದೊಡ್ಡರಾಯರ ಅನ್ನಾ ಉಂಡೀದೇನು, ಅಲ್ಲದs, ನಾ ಅವರ ಮನೀ ಪುರೋಹಿತನೂ ಆಗ ಬೇಕು. ಅವರ ಮನಿತನದ ಹಿತಾ ಮಾಡೋ ಕೆಲಸ ನನ್ನದು. ಆದಕ್ಕs ನೀವಿಬ್ಬರೂ ಒಂದು ನಿರ್ಣಯಕ್ಕ ಬರೋತನಕಾ, ನಾ ಇಲ್ಲೇ ಕೂಡತೀನಿ!

[ಎಂದು ದೊಡ್ಡರಾಯರ ಕುರ್ಚಿಯ ಮೇಲೆ ಕುಳಿತುಕೊಳ್ಳುವನು.]

(ಮಲ್ಲನು ಹೊರಗಿನಿಂದ ಬೇಲೀಫನನ್ನು ಕರೆದುಕೊಂಡು ಒಳಗೆ ಬರುವನು.)

ಮಲ್ಲ : ಯೆಪ್ಪಾ, ಇಂವ ಏನೋ ನಿಮ್ಮ ವ್ಯಾಲ ನೋಟೀಸ್ ಜಾರೀಮಾಡ್ಲಾಕ ಬಂದಾನಂತರೀ!

ಫಕೀರಪ್ಪ : ನಿಮ್ಮ ವ್ಯಾಲ ಅಲ್ಲರೀ. ಇದರಾಗ ದೊಡ್ಡರಾಯರ ವಾರಸ್‌ದಾರರು ಯಾರು ಆದಾರು—ಅವರ ವ್ಯಾಲ.

ಶಾಮರಾಯ : ಹೀಂಗs ನಾ....ಅಂದರ ನನ್ನ ಮಗಾ ದೊಡ್ಡ ರಾಯರ ವಾರಸ್‌ದಾರ! ಆದರ ಅಂವ ಅಜ್ಞಾನ ಇರುವದರಿಂದ ಅವನ ಸಂರಕ್ಷಕ ಅಂತ ನಾನs ಸಹಿಮಾಡತೀನಿ.

ಭೀಮರಾಯ : ಏ ಬೇಲಿಫ್, ಕೇಳೋ ಇಲ್ಲೆ! ದೊಡ್ಡರಾಯರಿಗೆ ವಾರಸದಾರರು ಅವರೂ ಅಲ್ಲಾ ಅವರ ಮಗನೂ ಅಲ್ಲಾ! ನಾ....ಅಂದರೆ.... ನನ್ನ ಮಗಾ ವಾರಸದಾರನಪಾ! ಅವನ ಅಜ್ಞಾನ ಸಂರಕ್ಷಣದಾರನಾದ ನಾನು ಆದಕ್ಕ ಸಹೀ ಮಾಡತೀನಿ! ಅದನ್ನ ಇಲ್ಲೆ ತಾ.

ಶಾಮರಾಯ : ಅದನ್ನ ಇಲ್ಲೆ ತಾರೋ.

ಭೀಮರಾಯ : ತಾರೋ ಅದನ್ನ ಇಲ್ಲೆ!

(ಇಬ್ಬರೂ ಬೇಲೀಫನ ಕೈಯಾಗಿನ ಕಾಗದ ಕಸಗೊಳ್ಳಲು ಹೋಗುವರು)

ಬೇಲೀಫ್ : (ದೂರ ಸರಿದು) ರಾಯರs ಸ್ವಲ್ಪ ತಾಳಿರಿ. ಇಬ್ಬರೂ ಬೇಕಾದರ ಸಹಿ ಮಾಡುವಂತೀರಿ. ಯಾಕಂದರೆ 'ಒಬ್ಬರ ಕಿಂತಾ ಇಬ್ಬರು ಲೇಸು' ಅಂತ ಹಿರ್ಯಾರು ಹೇಳತಿರತಾರು. ಒಬ್ಬರಾದರೂ ಸಹೀ ಮಾಡ್ಲಾಕ ಸಿಗತಾರೋ ಇಲ್ಲೋ ಅಂತ ಅನುಮಾನ ಮಾಡಿಕೊಂತ ನಾ ಬಂದಿದ್ನರೀ. ಈಗ ಇಬ್ಬರೂ ಕಬೂಲ್ ಆದ ವ್ಯಾಲ ಪಾಡs ಆತ್ಯು ಬಿಡ್ರಿ!

11—



**ಶಾಮರಾಯ :** ಅಲ್ಲೋ ಒಂದs ಆಸ್ತಿಗೆ ಇಬ್ಬರೂ ವಾರಸದಾರ್ರು ಹ್ಯಾಂಗ ಆಗತಾರ?

**ಭೀಮರಾಯ :** ಆಗದೇನು? ಇಬ್ಬರಲ್ಲ, ನಾಲ್ಕು ಮಂದಿನೂ ವಾರಸದಾರ್ರು ಆಗತಾರ!

**ಕಲ್ಲಂಭಟ್ಟರು :** ಅಲ್ಲೋ. ಆ ನೋಟೀಸು, ಅಲ್ಲ—ಸಮನಸು—ಯಾರ ಕಳಸ್ಯಾರ? ಯಾಕ ಕಳಿಸ್ಯಾರ ಅನ್ನೋದನ್ನ ಮೊದಲ ಕೇಳಿರಿ. ಆ ಮ್ಯಾಲ ಬೇಕಾದರ, ಇಬ್ಬರೂ ಸಹಿ ಮಾಡಿರಿ.

**ಶಾಮರಾಯ :** ಬರಾಬರಿ, ಬೇಲಿಫ್, ಅದರ ಹಕೀಕತ್ತು ಏನದ ಹೇಳ್ಯಾದರೂ ಹೇಳಪ್ಪಾ!

**ಬೇಲಿಫ** ಬೇಲಿಫರಿಗೆಲ್ಲಾ ಹಕೀಕತ್ತು ಗೊತ್ತಿರಬೇಕಂತ ನೇಮೇನೂ ಇಲ್ಲರಿ. ಆದ್ರs ನನಗೂ ದೊಡ್ಡರಾಯರು ಉಪಕಾರ ಮಾಡಿದ್ರು. ಅದಕ್ಕ ಇದರ ಹಕೀಕತ್ತರೇ ಏನೈತಿ ಕೇಳಬೇಕೆಂತ ಕೇಳಿದ್ನಿ. ಅದಕ ಸ್ವಲ್ಪ ಇದರ ಮಾಹಿತೀ ನಮ್ಮ ನಾಝುರಿಂದ ತಿಳದೈತಿರಿ.

**ಭೀಮರಾಯ :** ಅದನ್ನ ಲಗೂನ ಹೇಳು.

**ಬೇಲಿಫ :** ಇದರ ಮಾಹಿತೀ ಇಷ್ಟು ಐತೆಂತ ಅವರು ಹೇಳಿದ್ರು. ದೊಡ್ಡರಾಯರದೂ ಹಾಳೂರ ದೇಶಪಾಂಡೆಯವರದೂ ಋಣಾನುಬಂಧ ಭಾಳ ಇತ್ತಂತರಿ! ಹಾಳೂರ ದೇಶಪಾಂಡೆಯವರಿಗೆ ಒಂದು ಸಿನೀಮಾ ಕಂಪನೀ ತಗೀಬೇಕಂತ ತಲ್ಯಾಗ ಬಂತಂತರೀ. ಸಿನೇಮಾ ಕಂಪನಿಗೆ ಭಾಳ ರೊಕ್ಕ ಬೇಕಲ್ಲರೀ. ಅದಕ್ಕ ಅವರು ತಮ್ಮ ಆಸ್ತಿ ಬ್ಯಾಂಕಿನಾಗ ಒತ್ತಿಹಾಕಿ ಸಾಲಾ ತಗದ್ರೀ! ಆಗ ದೊಡ್ಡರಾಯರು ಅವರಿಗೆ ಜಾಮೀನ ಆಗಿದ್ರಂತರೀ! ಮುಂದ ಸಿನೀಮಾ ಕಂಪನೀ ವ್ಯವಹಾರ ಮೈಮ್ಯಾಲ ಬಂದು, ದೇಶಪಾಂಡೇರು ದಿವಾಳಿ ತಗದ್ರಂತರೀ. ಅವರ ಸಾಲ ಅವರ ಆಸ್ತಿಮ್ಯಾಲ ವಸೂಲ್ ಆಗ್ಲಿ-ಲ್ಲಂತ ತಿಳದು, ದೊಡ್ಡರಾಯರ ಕಡಿಂದ ಅದನ್ನ ವಸೂಲ ಮಾಡಬೇಕಂತ, ಬ್ಯಾಂಕಿನವರು ಈಗ ದಾವೇ ಮಾಡಿದಾರಂತ! ಆದರ ದೊಡ್ಡರಾಯರು ತೀರಿಕೊಂಡದ್ದರಿಂದ, ಅವರ ವಾರಸದಾರರಿಗೆ ಸಮನಸ್ ತೆಗೀಬೇಕು, ಅವರು ಕೋರ್ಟಿಗೆ ಬಂದು ಹಾಜರ್ ಆಗಬೇಕು ಅಂತ ಹುಕುಂ ಆಗೇತಿರಿ. ಆ ಸಮನಸ್ ಜಾರೀ ಮಾಡ್ಲಾಕs ನಾ ಬಂದೇನರಿ.

ಶಾಮರಾಯ : ಹೌದು, ಹಾಳೂರ ದೇಶಪಾಂಡೆಯವರ ಫಿಲ್ಮ್ ಕಂಪನಿ ದಿವಾಳೀ ತಗದದ್ದು ನಮಗೂ ಗೊತ್ತದ.

ಭೀಮರಾಯ : ಆದರ, ದೊಡ್ಡರಾಯರು ಅವರಿಗೆ ಜಾಮೀನಾದದ್ದನ್ನ ನಮ್ಮ ಮುಂದ ಹೇಳಿದ್ದಿಲ್ಲ ನೋಡ್ರಿ !

ಕಲ್ಲಂಭಟ್ಟರು : ಇಂಥಾ ವಿಷಯ ಹೇಳೋಹಾಂಗ ಇರೂದಿಲ್ಲರೀ !

ಬೇಲಿಫ : ಹೌದರೀ ! ಶೆಟ್ಟೀ ಲೆಕ್ಕ ಅಂವ ಸತ್ತ ಮ್ಯಾಲs ತಿಳಿತs-ದಂತರೀ.

ಮಲ್ಲ : ಏ ಬೇಲಿಫಾ, ನಮ್ಮ ದೊಡ್ಡರಾಯರ ಸಂಬಂಧ ಹಾಂಗೆಲ್ಲಾ ಮಾತಾಡಬ್ಯಾಡ ನೋಡ ಮತ್ತ ! ಇನ್ನೊಮ್ಮೆ ಹೀಂಗ ಮಾತಾಡಿದರ ಪಾಡಾಗಾಕಿಲ್ಲ !

ಶಾಮರಾಯ : ಅದಿರಲಿ, ಬಿಡೋ ! ನಮ್ಮ ದೊಡ್ಡರಾಯರು ಎಷ್ಟು ರೂಪಾಯಿಗೆ ಜಾಮೀನು ಆಗಿದ್ದರಂತs ?

ಬೇಲಿಫ : (ಕಾಗದ ತಿರುವಿ) ಎರಡು ಲಕ್ಷ ರೂಪಾಯಿಗೆ ಜಾಮೀನಾಗಿದ್ದರಂತರೀ !

ಭೀಮರಾಯ : ಏನು....ಏನಂದಿ? ಎರಡು ಲಕ್ಷs? ದೊಡ್ಡರಾಯರ ಮನೀ ಮುಣಗೋ ಹೊತ್ತ ಬಂತಲ್ಲಾ !

ಶಾಮರಾಯ : ಹೌದು. ದೊಡ್ಡರಾಯರ ಆಸ್ತೀ ಎಲ್ಲಾ ಮಾರಿದರೂ ಒಂದು ಲಕ್ಷ ರೂಪಾಯಿ ಆಗಬೇಕಾದ್ರ ಮಸ್ತಾತು. ಎರಡು ಲಕ್ಷ ಯಾರು ತುಂಬುವರು ?

ಭೀಮರಾಯ : ನೀವು ತುಂಬಬೇಕು, ನೀವು ! ನೀವು ದೊಡ್ಡರಾಯರಿಗೆ ನಿಮ್ಮ ಮಗನ್ನs ದತ್ತಕ ಕೊಟ್ಟದೀರಿ. ಅದಕ್ಕ ನೀವು ತುಂಬಬೇಕು. ಏ ಬೇಲಿಫ, ಆ ಸಮನಸ್ ಅವರಿಗೆ ಜಾರೀ ಮಾಡಿ ಹೋಗು !

ಶಾಮರಾಯ : ನಾ ದೊಡ್ಡರಾಯರಿಗೆ ನನ್ನ ಮಗನ್ನ ದತ್ತಕ ಕೊಟ್ಟೀ ಇಲ್ಲ. ಈ ಭೀಮರಾಯರs ದತ್ತಕ ಕೊಟ್ಟಾರ. ಅವರಿಗೇ ಆ ಸಮನ್ಸು ಜಾರೀ ಮಾಡು, ಏನಪಾ !

ಭೀಮರಾಯ : ನಾ ನನ್ನ ಮಗನ್ನ....ದೊಡ್ಡರಾಯರಿಗೆ ·ದತ್ತಕ ಕೊಡದಿದ್ದರೂ ದೊಡ್ಡ ರಾಯರಿಗೆ ಅವರs ವಾರಸದಾರ್ ಆಗತಾರ. ಯಾಕಂದರ ದೊಡ್ಡರಾಯರ ತಮ್ಮ ಅವರು.

ಶಾಮರಾಯ : (ಹಲ್ಲು ಕಡಿಯುತ್ತ) ಭೀಮರಾಯಾ, ನಿನ್ನ ಹಂಚಿಕಿ ಎಲ್ಲಾ ನನಗs ತಿಳೀತು ಅಂದೆ. ಇದರ ಸೇಡು ಒಮ್ಮಿಲ್ಲಾ ಒಮ್ಮೆ ತೀರಿಸಿ-ಕೋತೇನು. ಆದರ ನಿನ್ನ ಹಂಚಿಕಿ ಮಾತ್ರ ಸಫಲ ಆಗೂದಿಲ್ಲಾ ಅಂದೆ.

ಭೀಮರಾಯ : ಅದು ಹ್ಯಾಂಗ ಆಗೂದಿಲ್ಲ ? ನೀ ದೊಡ್ಡರಾಯರ ತಮ್ಮ ಅಲ್ಲೇನು ?

ಶಾಮರಾಯ : ತಮ್ಮ ಹೌದೋ ! ಆದರ ದೊಡ್ಡರಾಯರೂ ಈ ಮನಿಗೆ ದತ್ತಕ ಬಂದಿದ್ದರು. ಇದು ನಮ್ಮ ತಾಯೀ ತವರುಮನಿ. ತಿಳೀತs? ಅದಕ್ಕ ನಾ ಏನೂ ಅವರ ವಾರಸದಾರ ಆಗೂದಿಲ್ಲ. ಬೇಕಾದರ ಕಲ್ಲಂಭಟ್ಟರನ್ನ ಕೇಳು.

ಭೀಮರಾಯ : ಹೌದೇನರೀ ಭಟ್ಟರ ?

ಕಲ್ಲಂಭಟ್ಟರು : ಇರಬಹುದು. ನನಗ, ನೀವು ಏನು ನಡಿಸೀರಿ ಅನ್ನೋದs ತಿಳೀವೊಲ್ಲದು !

ಬೇಲಿಫ್ : ಅಲ್ಲರೀ ರಾಯರ, ಇದರಾಗ ನಾ ಯಾರಿಗೆ ಸಮನಸ್ ಜಾರೀ ಮಾಡಬೇಕನ್ನೋದನ್ನ ಗಡಾನ ಹೇಳರಿ.

ಶಾಮರಾಯ : ನಾ ವಾರಸ್‌ದಾರ ಅಲ್ಲ ?

ಭೀಮರಾಯ : ನಾನೂ ವಾರಸ್‌ದಾರ ಅಲ್ಲ ?

ಬೇಲೀಫ : ಇದೇನರೀ ಮತ್ತ ? ಆಗಳೇ ನನ್ನ ಕೈಯಾಗಿನ ಕಾಗದಾ ಕಸಗೊಂಡು ಸೈ ಮಾಡ್ಲಾಕ ಬಂದಿದ್ದಿರಿ. ಈಗ 'ನಾ ವಾರಸದಾರ ಅಲ್ಲಾ.... ನಾ ವಾರಸದಾರ ಅಲ್ಲಾ' ಅನ್ನಾಕ ಹತ್ತೀದೀರಿ. ಸರಕಾರದ ಮನಸ್ಯಾನ ಗೂಡಾ ಹುಡುಗಾಟಕೀ ನಡಿಸೀರಲ್ಲಾ ನೀವು ?

(ಮಲ್ಲ ಹೊರಗಿನಿಂದ ಓಡುತ್ತ ಬಂದು)

ಮಲ್ಲ : ಯೆಪ್ಪಾ ಭಟ್ಟರ, ಅಲ್ಲೆ ಯಾರ ಬರ್ಲಾಕ ಹತ್ತಿದಾರು ನೋಡರೀ ಯೆಪ್ಪಾ ! ದೊಡ್ಡರಾಯರು ಅಲ್ಲs ಅವರು ?

ಕಲ್ಲಂಭಟ್ಟರು : ( ಕುರ್ಚಿಯಿಂದ ಪುಟಿದೆದ್ದು ) ದೊಡ್ಡರಾಯರು ? ಎಲ್ಲ್ಯದಾರೋ ?

ಮಲ್ಲ : ಅಲ್ಲೇ ನೋಡ್ರೀಯಪ್ಪಾ ! ಅವರು ದೊಡ್ಡರಾಯರs ಅಲ್ಲs? ಸತ್ತವರು ಹ್ಯಾಂಗ ಎದ್ದು ಬಂದರ್ರೀ ! ದೆವ್ವಾಗಿ ಬಂದರೇನರೀ ಮತ್ತs? ಅಯ್ಯೋ ದೆವ್ವರೀ ಯೆಪ್ಪಾ. ದೆವ್ವs (ಚೀರುತ್ತ ಬೀಳತೊಡಗುವನು. ಕಲ್ಲಂಭಟ್ಟರು ಅವನನ್ನು ಗಟ್ಟಿಯಾಗಿ ಹಿಡಿಯುವರು.)

ಶಾಮರಾಯ : ಅಯ್ಯೋ ದೊಡ್ಡರಾಯರ ಭೂತ !

ಭೀಮರಾಯ : ಅಯ್ಯೋ ದೊಡ್ಡರಾಯರ ಪಿಶಾಚಿ !

(ದೊಡ್ಡರಾಯರೂ ರಂಗರಾಯರೂ ಬರುವರು).

ದೊಡ್ಡರಾಯ : ಶಾಮರಾಯಾ, ಭೀಮರಾಯಾ, ನಾ ಭೂತ ಅಲ್ಲಾ, ಪಿಶಾಚಿ ಅಲ್ಲಾ ! ನೀವೇನೂ ಘಾಬರಿ ಆಗಬ್ಯಾಡ್ರಿ. ಮಲ್ಲ್ಯಾ, ಏ ಮಲ್ಲ್ಯಾ ! ಕಣ್ಣ ತಗದು ನೋಡಲೇ ನಾ ಯಾರನ್ನೋದು ! ಇದೇನು ಕಲ್ಲಂಭಟ್ಟರು ಬಂದಾರಲ್ಲಾ ? ಭಟ್ಟರs, ನಿಮಗ ನನ್ನ ಗುರುತು ಹತ್ತಲಿಲ್ಲs? ನಾ ನಿಮ್ಮ ದೊಡ್ಡರಾಯಾ ! ನನಗ ಅನಿಸಿತ್ತು. ನೀವೆಲ್ಲಾರೂ ನನ್ನ ಪಿಶಾಚಿ ಅಂತ ತಿಳಕೋತೀರಿ ಅಂತ. ನಿಮಗ ಖಾತ್ರೀ ಮಾಡಿಕೊಡ್ಡೋದಕ್ಕೊ, ಸಂಗತಿಲೇ ರಂಗರಾಯರನ್ನ ಕರಕೊಂಡು ಬಂದೀನಿ ! ಬೇಲಿಫ, ನನ್ನಗುಡಾ ಬಂದ ರಾಯರ ಗುರುತು ಹತ್ತಿತೇನು ನಿನಗs ?

ಬೇಲಿಫ : ಹತ್ತದೇನರೀ, ಅವರs ನಮ್ಮ ಮುನಸೂಫರು ! ಸಲಾಂರೀ ರಾವಸಾಬ (ಸಲಾಂ ಮಾಡುವನು.)

ರಂಗರಾಯ : (ಬೇಲಿಫನಿಗೆ) ಫಕೀರಪ್ಪಾ, ನೀನೂ ಸ್ವಲ್ಪ ಇಲ್ಲೇ ನಿಲ್ಲು.

ಬೇಲಿಫ : ನಿಲ್ಲತೇನರಿ. (ಒಂದು ಕಡೆಗೆ ಸರಿದು ನಿಲ್ಲುವನು.)

ಕಲ್ಲಂಭಟ್ಟರು, : ರಾಯರs ಇದೆಲ್ಲಾ ಏನು ? ನನಗಂತೂ ಇಲ್ಲೆ ಏನ ನಡದದ ಅನ್ನೋದs ತಿಳೀವೊಲ್ಲದು ! ಇದೆಲ್ಲಾ ಏನು ? ನನಗಂತೂ ಇದೇನು ಕನಸೋ ನನಸೋ ತಿಳೀದ್ಹಾಂಗ ಆಗೇದ. ನನಗs ಹುಚ್ಚು ಹಿಡಿಯೋದು ಒಂದ ಉಳದದ.

ದೊಡ್ಡರಾಯ : ಭಟ್ಟರs! ಘಾಬರಿ ಆಗಬ್ಯಾಡ್ರಿ. ಇದೂ ಒಂದು ನಾಟಕ. ಜೀವನ ನಾಟಕ! ಈಗ ನಡದದ್ದು ಇದರ ಕಡೀ ಅಂಕು! ಇದನ್ನಷ್ಟು ಮುಗಿಸಿ ನಾ ಹೋಗಬೇಕಾಗೇದ ತಿಳೀತ.

ಶಾಮುರಾಯ : ನಾಟಕಾ ?

ಭೀಮುರಾಯ : ನೀವು ಸತ್ತಿಲ್ಲಾ ಹಾಂಗಾದ್ರ ?

ದೊಡ್ಡರಾಯ : ನಾ ಸತ್ತಿಲ್ಲ, ಸತ್ತಿದ್ದಿಲ್ಲ.

ಶಾಮುರಾಯ : ಯಾತ್ರಿಗೆ ಹೋದದ್ದು ಎಲ್ಲಾ ಸುಳ್ಳೇನು ?

ದೊಡ್ಡರಾಯ : ಸುಳ್ಳು, ನಾನು ಕಾಶೀಗೂ ಹೋಗಿಲ್ಲಾ, ಬದರಿಗೂ ಹೋಗಿಲ್ಲ! ಒಂದು ಊರಿಗೆ ಹೋಗಿ ಇದೆಲ್ಲಾ ನಾಟಕಾ ಆಡಿದೆ. ನನ್ನ ಆಸ್ತಿಗೆ ಯಾರನ್ನ ದತ್ತಕ ತಗೋಬೇಕು? ತಮ್ಮನ ಮಗನ್ನs ತಗೋಬೇಕೋ, ಹೆಂಡತೀ ತಮ್ಮನ ಮಗನ್ನ ತಗೋಬೇಕೋ.... ಯಾರನ್ನ ದತ್ತಕ ತಗೋಬೇಕು ಅಂತ ಪ್ರಶ್ನೆ ಬಿತ್ತು. ನಾಲ್ಕು ವರುಷ ಆದರೂ ಇದು ಬಗೀಹರೀಲಿಲ್ಲ. ಕಡೀಕ ಯಾರು ನನಗೆ ಖರೇ ವಾರಸ್‌ದಾರ್‍ರು ಆಗತಾರೋ ನೋಡಬೇಕು—ಅಂತ ಈ ನಾಟಕಾ ಆಡಿದೆ. ಶಾಮುರಾಯ ಆಗಲಿ, ಭೀಮರಾಯ ಆಗಲಿ, ಖರೇ ವಾರಸದಾರ್‍ರು ಆಗಲಿಲ್ಲ. ಯಾಕಂದರ, ನನ್ನ ಆಸ್ತೀ ತಗೊಳ್ಳಲಿಕ್ಕೆ ಮಾತ್ರ ಅಷ್ಟs ಅವರು ವಾರಸದಾರ್‍ರು ಆದ್ರು; ಆದರ ನನ್ನ ಸಾಲಕ್ಕ ಮಾತ್ರ ಆಗಲಿಲ್ಲ. ಖರೇ ವಾರಸದಾರ್‍ರು ಅಂದರ ಆಸ್ತಿಗೂ ಆಗಬೇಕು; ಸಾಲಕ್ಕೂ ಆಗಬೇಕು. ಸುಖಕ್ಕೂ ಆಗಬೇಕು, ದುಃಖಕ್ಕೂ ಆಗಬೇಕು. ಈಗ ನನಗ ಗೊತ್ತಾತು; ನನಗ ವಾರಸ್‌ದಾರು ಯಾರೂ ಇಲ್ಲಾ ಅಂತ! ಶ್ಯಾಮರಾಯಾ, ಭೀಮರಾಯಾ, ನನ್ನ ಮಾತು ಸುಳ್ಳೇನು?

[ ಇಬ್ಬರೂ ತಲೆ ತಗ್ಗಿಸಿಕೊಂಡು ಸುಮ್ಮನೆ ನಿಲ್ಲುವರು ]

ಕಲ್ಲಂಭಟ್ಟರು : ಹಾಂಗಾದರ ನಿಮ್ಮ ಆಸ್ತಿಯೆಲ್ಲಾ ಏನು ಮಾಡುವರು ?

ದೊಡ್ಡರಾಯರು : ಅದನ್ನs ಹೇಳತೇನಿ ಕೇಳ್ರಿ. ನನ್ನ ಆಸ್ತಿಯೆಲ್ಲಾ ಒಂದು ಸಾರ್ವಜನಿಕ ವಿಶ್ವಸ್ತ ನಿಧಿ ಅಂತ ಮಾಡಿ, ಅದರಿಂದ ಬರುವ ಬಡ್ಡಿಯಿಂದ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನಗಳನ್ನು ಗೊತ್ತುಮಾಡಿ

ದ್ದೇನ್ರಿ, ಮಕ್ಕಳಿಲ್ಲದ ನನಗ, ಬಡ ವಿದ್ಯಾರ್ಥಿಗಳೇ ಮಕ್ಕಳು. ಮತ್ತ ಈಗ ಊರಾಗ ಇಲ್ಲದಾಗ ಶ್ಯಾಮರಾಯಾ ಭೀಮರಾಯಾ ಏನೇನು ತಗೊಂಡಾರೋ ಅದನ್ನ ಅವರಿಗೇ ಬಿಟ್ಟಿದ್ದೇನಿ. ಮತ್ತ ನಾ ಹೇಳಿದ್ದೆಲ್ಲಾ ನಿಮಗ ಸುಳ್ಳೆನಿಸಬಾರದು ಅಂತ, ಇಲ್ಲೆ ಮುನಸೂಫರಾಗಿದ್ದಂಥಾ ರಂಗರಾಯರನ್ನ ಕರಕೊಂಡು ಬಂದೀನಿ. ಇವರ ತಂದಿಯವರಿಗೆ ನನಗೂ ಭಾಳ ಋಣಾನುಬಂಧ ಇತ್ತು.

**ರಂಗರಾಯ :** ಹೌದು. ಶ್ಯಾಮರಾಯರೂ ಭೀಮರಾಯರು, ದೊಡ್ಡರಾಯರು ಹೇಳಿದ್ದೆಲ್ಲಾ ಖರೇ ಅದ. ನಾವಿಬ್ಬರೂ ಕೂಡಿ ಒಂದು ನಾಟಕ ಮಾಡಿದೆವು. ಈ ನಾಟಕಕ್ಕ ನಾ ವ್ಯವಸ್ಥಾಪಕ ಆಗಿದ್ದೆ. ಅವರು ದಿಗ್ದರ್ಶಕರು !

**ಕಲ್ಲಂಭಟ್ಟರು :** ನಾಟಕ ಮಾತ್ರ ಯಶಸ್ವಿ ಆತ ನೋಡ್ರಿ.

**ದೊಡ್ಡರಾಯರು :** ಅದಕ್ಕ ನಮ್ಮ ರಂಗರಾಯರ ಉಪಕಾರಾ ಎಷ್ಟು ನೆನಿಸಿದರೂ ಕಡಿಮೇ !

**ರಂಗರಾಯ :** ನನ್ನ ಉಪಕಾರ ಏನ ಬಿಡ್ರಿ. ಮಕ್ಕಳಿಲ್ಲದವರಿಗೆಲ್ಲಾ ನಿಮ್ಮಂಥಾ ಬುದ್ಧಿ ಹುಟ್ಟಿದರ, ಅದ ನಮಗೆಲ್ಲಾ ದೊಡ್ಡ ಉಪಕಾರಾ.

**ದೊಡ್ಡರಾಯರು :** ಭಟ್ಟರ, ಇನ್ನ ನನಗ ಯಾತ್ರಿಗೆ ಹೋಗಲಿಕ್ಕೆ ಅಪ್ಪಣೆ ಕೊಡ್ರಿ.

**ಮಲ್ಲ :** ಯೆಪ್ಪಾ ದನೇರ, ಕಾಲಿಗೆ ಬಿದ್ನಿರೀ ಎಪ್ಪಾ! ನಿಮಗೆ ದೆವ್ವ ಅಂತ ಅಂದದ್ದು ತಪ್ಪಾತ್ರಿ. ನೀವು ಕರೇನ ಸತ್ತಿದ್ರಿ ಅಂತ ತಿಳಿದು ಹಾಂಗ ಒದರಿನ್ನಿರಿ. ಎಪ್ಪಾ ಈ ಮಗನ್ನ ತಪ್ಪು ಹೊಟ್ಯಾಗ ಹಾಕ್ಕೋರಿ. (ಕಾಲಿಗೆ ಬೀಳುವನು).

**ಶಾಮರಾಯ-ಭೀಮರಾಯ :** ದೊಡ್ಡರಾಯರ ನಮ್ಮ ತಪ್ಪು ಹೊಟ್ಯಾಗ ಹಾಕ್ಕೋರಿ. (ಅಡ್ಡ ಬೀಳುವರು).

[ ತೆರೆ ಬೀಳುವದು ].

---

# ೩. ಶಿವಭಕ್ತ ನಂದನಾರ್

(ಭಕ್ತಜೀವನ ಏಕಾಂಕಿಕೆ)

## ಪರಿಚಯ

ಈ ಭಕ್ತಿಭಾವಪರಿಪುಷ್ಟವಾದ ಏಕಾಂಕಿಕೆಯನ್ನು ಬರೆದವರು ಶ್ರೀಮಾನ್ ಬೆಟಗೇರಿ ಕೃಷ್ಣಶರ್ಮರು. 'ಆನಂದಕಂದ' ಎಂಬ ಇವರ ಕಾವ್ಯನಾಮದಿಂದ ಅನೇಕ ಕಥೆ, ಕಾದಂಬರಿ, ಕವನಗಳು, ನಾಟಕಗಳು ಪ್ರಕಟವಾಗಿ ಜನರ ಮನ್ನಣೆಯನ್ನು ಗಳಿಸಿವೆ. ಈ ಏಕಾಂಕಿಕೆಯು ಧಾರವಾಡದ ಆಕಾಶವಾಣಿ ಕೇಂದ್ರದಿಂದ, ಹಿಂದೊಮ್ಮೆ ಬಿತ್ತರಗೊಂಡುದೂ ಉಂಟು.

ಶೀಲ-ಸದಾಚರಣೆಯ ಮಾನವನು ಹೀನಕುಲದಲ್ಲಿ ಹುಟ್ಟಿದರೂ ಅವನು ಕುಲಜ, ಅವು ಇಲ್ಲದ ಮೇಲುಕುಲದವರೇ ನಿಜವಾಗಿಯೂ ಹೀನಕುಲದವರು — ಎಂಬ ನೀತಿಯನ್ನು ಪ್ರಸ್ಥಾಪಿಸಲು ಹೊರಟ ರಸಮಯವಾದ ಏಕಾಂಕಿಕೆಯಿದು.

### ★ ಪಾತ್ರವಿವರಣೆ ★

ನಂದ : ಹೊಲೆಯರ ತರುಣ; ಪಣಿಯ : ನಂದನ ಸಂಗಾತಿ;
ಕೇರಿಯ ಹಿರಿಯ : ಹೊಲೆಯರ ಮುದುಕ;
ಪೂ ಜಾ ರಿ : ಹೊಲೆಯರ ಪೂ ಜಾ ರಿ;
ಪಾರುಪತ್ಯಗಾರ : ಶಿವಾಲಯದಲ್ಲಿ;
ನಂದನ ತಾಯಿ : ಕಾಳಮ್ಮ; [ಬೆಳ್ಳಿ : ನಂದನ ಸಹಚಾರಿಣಿ

★ ★ ★ ★

### ೧ ನೆಯ ದೃಶ್ಯ

(ಕ್ರಿಸ್ತಶಕದ ೧೨ನೆಯ ಶತಮಾನದ ಹಿಂದಿನ ಕಾಲದ ಸಂಗತಿ. ತಮಿಳುನಾಡಿನಲ್ಲಿ ಆಗ ಚೋಳವಂಶೀಯರು ರಾಜ್ಯವಾಳುತ್ತಲಿದ್ದರು. ಈ ಚೋಳಮಂಡಲಕ್ಕೆ ಸೇರಿದ ಆದನೂರು, ಅಲ್ಲಿಯ ಪುರಾಣಪ್ರಸಿದ್ಧ ಶಿವಮಂದಿರದ ಮೂಲಕ ಪುಣ್ಯಕ್ಷೇತ್ರ

ವೆನಿಸಿಕೊಳ್ಳುತ್ತಲಿದ್ದಿತು. ಊರ ತುಂಬ ಆಚಾರಶೀಲರಾದ ಬ್ರಾಹ್ಮಣರ ಮನೆಗಳು. ಆದನೂರು ಅವರಿಗೆ ದತ್ತಿಯಾಗಿದ್ದ ಅಗ್ರಹಾರ.

ಆದನೂರಿನ ಹೊಲೆಗೇರಿಯಲ್ಲಿ ನಂದನದೂ ಒಂದು ಮನೆತನ. ಮನೆಯಲ್ಲಿ ತಂದೆ–ತಾಯಿ, ನಂದ. ಅಂದಿನ ದೇಶಾಚಾರದಂತೆ, ಹೊಲೆಯರೆಲ್ಲ ತಂತಮ್ಮ ಯಜಮಾನರ ಹೊಲಗಳಲ್ಲಿ ಬೇಸಾಯ ಮಾಡಿಕೊಟ್ಟು, ದೊರೆತ ಪಡಿಯಿಂದ ತಮ್ಮ ಜೀವನನಿರ್ವಾಹ ಸಾಗಿಸಬೇಕು. ತಂದೆ–ತಾಯಿ, ನಂದ ಎಲ್ಲರೂ ಒಬ್ಬ ಕುಲಜ ಯಜಮಾನನ ಮನೆಯ ಊಳಿಗದಾಳುಗಳು. ನಂದನಿನ್ನೂ ಹದಿನಾರು ವರುಷದ ತರುಣ.

(ನಂದನು ಹಾಡನ್ನು ಹೇಳುವನು. ಅವನು ಹೇಳಿದ್ದನ್ನೇ ಉಳಿದ ಹುಡುಗರು ಹಿಮ್ಮೇಳವಾಗಿ ಹೇಳುತ್ತಿರುವರು.)

ಶಿವಶಂಕರ ಶಿವಶಂಕರ ಶಿವಹರ ಗಿರಿಜಾರಮಣಾ ।
ಭವಭಯಹರ ಗಂಗಾಧರ ಭಕ್ತಾನತ ಶುಭಚರಣಾ ! ॥ಪ॥
ರವಿಯ ಕಿರಣಮಾಲೆಯಂತೆ ನಿನ್ನ ದಯೆಯ ಜಾಲಾ;
ತವಿಸದಯ್ಯ ಮಾನವರೊಳು ಗಣಿಸಿ ಕೀಳು ಮೇಲಾ....
ಶಿವನ ಭಕ್ತಿಯೊಂದೆ ಕೇಳಿ ಸದಾಚಾರ ಶೀಲಾ ॥೧॥
ಶಿವಶಂಕರ ಶಿವಶಂಕರ ಶಿವಹರ ಗೌರೀರಮಣಾ ।
ಭವಭಯಹರ ಗಂಗಾಧರ ಪತಿತಜೀವಸಂತರಣಾ ! ॥

(ಕೇರಿಯ ಬಯಲೊಂದರಲ್ಲಿ ಕುಳಿತು ನಂದ, ನಂದನ ಒಡನಾಡಿಗಳು ಭಜನೆಯನ್ನು ನಡೆಯಿಸಿರುವಾಗ, ಕೇರಿಯ ಹಿರಿಯ ಅಲ್ಲಿಗೆ ದಡದಡನೆ ಓಡಿಬಂದು, ಸಿಡಿನುಡಿಗಳನ್ನು ಆಡುವನು.)

ಕೇರಿಯ ಹಿರಿಯ:— ಅಯ್ಯೋ ! ಇದೇನ್ರೋ ಇದು ? ನಿಮಗ್ಯಾಕ್ರೋ ಅಯ್ಯಗಳ ದೇವರ ಭಜನಿ ?

(ಹುಡುಗರ ಗುಂಪಿನಲ್ಲಿಯ ಒಬ್ಬ ಹುಡುಗಿ, ಸಲುಗೆಯ ನುಡಿಯಲ್ಲಿ ಹೇಳುವಳು. ಹುಡುಗಿಯ ಹೆಸರು ಬೆಳ್ಳಿ. ಕೇರಿಯ ಹಿರಿಯನ ಮೊಮ್ಮಗಳು ಬೆಳ್ಳಿ.)

ಬೆಳ್ಳಿ:— ಓ ! ಅಜ್ಜಯ್ಯ ಬಂದ ! ಅಜ್ಜಯ್ಯಾ, ನಂದಣ್ಣ ನಮಗೆ ಶಿವಬಜನೀ ಹೇಳಿಕೊಡತಾನೆ. ಅಂವ ಹೇಳಿದಾಂಗೇ ನಾವೆಲ್ಲಾ ಹೇಳ್ತೀವೆ ! ನೀನೂ ಬರ್ತೀಯಾ ಬಜನೀ ಮಾಡಾಕೆ ?

**ಕೇರಿಯ ಹಿರಿಯ:—** (ಸಂತಾಪದ ಧ್ವನಿಯಲ್ಲಿ) ಕೋತಿ!.... ಕೋತಿ ತಾನು ಕೆಟ್ಟದ್ದಲ್ಲದೆ ತನ್ನ ಹಿಂಡನೆಲ್ಲ ಕೆಡಿಸಿತಂತೆ! ಏನಲೇ ನಂದ್ಯಾ ಇದು? ನಿನಗೆ ಹತ್ತುಸಾರೆ ಸಿಟ್ಟುಮಾಡಿ ಹೇಳೀನಿ; ಆದರ ನೀನು ನಿನ್ನ ಈ ತುಂಟಾಟಾ ಬಿಡವೊಲ್ಲಿ!

**ನಂದ:—** (ಸಮಾಧಾನದ ಸ್ವರದಲ್ಲಿಯೆ) ಶಿವಭಜನಿ ಅಂದರ ತುಂಟಾಟ ಏನು ಅಜ್ಜಯ್ಯಾ?

**ಕೇರಿಯ ಹಿರಿಯ:—** ತುಂಟಾಟ ಅಲ್ಲದೇ ಇನ್ನೇನು? ನಮ್ಮ ದೇವರು ನಮಗೆ ಬೇಕಾದಷ್ಟು ಇರುವಾಗ, ಆ ಅಯ್ಯಗಳ ದೇವರನ್ನ ಯಾಕ ತಂದು ಕೇರಿಯೊಳಗ ಸೇರಸ್ತೀಯಾ? ಈ ಅನಾಚಾರಾನ ತಡದಾವೇ ನಮ್ಮ ದೇವ್ರು! ನಮ್ಮ ದೇವ್ರೆಲ್ಲಾ ಮುನಿದುಕೊಂಡು ಬಿಟ್ಟರೆ, ಎಷ್ಟೊಂದು ಜೀವದ ಬಲಿಯ ಹರಕಿ....ಕೋಲ....ಒಪ್ಪಿಸಬೇಕಾದೀತಂಬೂ ಅರಿವು ಐತೇನು ನಿನಗ?

**ನಂದ:—** ಮುನಿಯುವ ದೇವರುಗಳೆಲ್ಲಾ ದೇವರುಗಳೇ ಅಲ್ಲ, ಅಜ್ಜಯ್ಯಾ!

**ಕೇರಿಯ ಹಿರಿಯ:—** ಅಯ್ಯೋ! ನೋಡಿದ್ಯಾ ಈ ಅವಿಚಾರದ ಮಾತನ್ನ! ನಮ್ಮ ಕೇರಿಗೇನೋ ಅಳಿಗಾಲ ಬಂದೈತೆ! ಕರಿಗಾಲ ದನಾ ಹುಟ್ಟಿದ್ಹಾಂಗ ನಮ್ಮ ಕೇರ್ಯಾಗ, ಈ ನಂದ ಹುಟ್ಟಿ ಬಂದಾನ! ಅಯ್ಯೋ, ದೇವರೇ! ವೀರನ್, ಇರಳುಯ್ಯಾ, ಕಾಟ್ಟೇರೀ, ತೂರಿತ್ತೂಂಡಿ, ಚಾಮುಂಡಿ, ಮಾರಿಮುನಿಯ! ಶೆಂಗಿಲಿ! ಈ ಪೋರನ ಮಾತನ್ನ ಎಣಿಸಬೇಡಿ ತಂಡೆ-ತಾಯಿಗಳೇ! ಏ ಮಡಿಯಾ, ನೀನು ನಮ್ಮ ಕೇರಿಗೆ ಮಾರಿಯಾಗಿ ಹುಟ್ಟಿ-ದಿಯಾ! ಬೆಳ್ನರಿ! ಗೂಬೆ!

**ನಂದ:—** ಅಜ್ಜಾ, ಭಕ್ತಿಪ್ರಿಯನಾದ ಆ ಕರುಣಾಕರ ಶಂಕರ ಎಲ್ಲರಿಗೂ ಒಳ್ಳೆಯದನ್ನ ಮಾಡತಾನಜ್ಜಾ! ಆತನ ದಯೆಯ ಎದುರು ಯಾವ ವೀರ–ಮಾರಿಗಳ ಮುನಿಸೂ ಏನೂ ಮಾಡಲಾರದು, ಅಜ್ಜಾ!

**ಕೇರಿಯ ಹಿರಿಯ:—** ಅಯ್ಯೋ, ನಮ್ಮ ಹೊಲೆಯರ ಮಕ್ಕಳ ಬಾಯಿಂದ ಎಂದೂ ಬಾರದ ಮಾತು ಇವೆಲ್ಲಾ!....ಈ ಪೋರನಿಗೆ ಯಾವುದೋ ಅಯ್ಯಗಳ ಭೂತ ಹಿಡಿದಾಂಗ ಕಾಣತೈತೆ! ಈ ಭೂತಬಿಟ್ಟು

ಹೋಗುವ ಹಾಂಗೆ ಉಪಾಯ ಮಾಡಲಿಕ್ಕೆ ಇವನ ತಂದೆ–ತಾಯಿಗಳಿಗೆ ಹೇಳಬೇಕು. ಇಲ್ಲದಿದ್ದರೆ, ನಮ್ಮ ಕೇರೀನೆಲ್ಲಾ ಮಾರಿಮುನಿಯ ಉರಿದು ಹಾಕಿಬಿಟ್ಟಾನು! ತೂರಿತ್ತುಂಡೀ, ಚಾಮುಂಡೀ, ನೀವೇ ಕಾಯಬೇಕು ನಮ್ಮ ಕುಲಾನ!

ನಂದ:— ಇಲ್ಲಿ ಕೇಳು ಅಜ್ಜಯ್ಯಾ:

ಲೋಕಕಾದಿಯು ಶಿವನು, ಲೋಕವೆಂಬುದು ಶಿವನು,
ಲೋಕವನು ಸೃಜಿಸಿ ಸಲಹುವನು ಶಿವನು!
ಲೋಕದೀ ಜೀವಜಂಗುಳಿಯ ಯೋಗಕ್ಷೇಮ
ತೂಕದಲಿ ನೋಡಿ ನಡೆಯಿಸುವ ಶಿವನು!
ಎಲ್ಲ ದೇವರ ದೇವ ತಂದೆ ಶಿವನೋ!
ಎಲ್ಲ ಲೋಕಕೆ ಒಡೆಯನೊಬ್ಬ ಶಿವನೋ....!!

(ಹುಡುಗರೆಲ್ಲರೂ ಕೊನೆಯುವೆರಡು ಸಾಲುಗಳನ್ನು ಮತ್ತೆ ಹಿಮ್ಮೇಳವಾಗಿ ಹೇಳುವದು.)

"ಎಲ್ಲ ದೇವರ ದೇವ ತಂದೆ ಶಿವನೋ!
ಎಲ್ಲ ಲೋಕಕೆ ಒಡೆಯನೊಬ್ಬ ಶಿವನೋ!"

ಕೇರಿಯ ಹಿರಿಯ:— ಅಯ್ಯಪ್ಪಾ, ಇದು ಭೂತದ ಕಾಟವೇ ನಿಜ! ಕಾಟ್ಟೇರಿಗೆ ಕೋಲ ಒಪ್ಪಿಸಿ ಇದನ್ನು ಹೊಡೆದು ಹಾಕಲಿಕ್ಕೇಬೇಕು! ಅದಕ್ಕಾಗಿ ನಾನು ಈಗಲೇ ನಂದನ ತಂದೆ–ತಾಯಿಗಳನ್ನ ಕಾಣಬೇಕು! (ಹೋಗು-ಹೋಗುತ್ತಲೇ) ಏ ಹೈದಗಳಿರಾ, ನಂದನ್ನ ಭೂತ ಹಿಡಿದೈತೆ; ಅವನ ಸಂಗತಿ ಹಿಡೀಬ್ಯಾಡ್ರೀ! ಬೆಳ್ಳೀ, ನಡಿಯೆ ಮನಿಗೆ ಹೋಗೋಣ!

ಬೆಳ್ಳಿ:— ಹೋಗೋ ಅಜ್ಜಯ್ಯಾ! ನಾ ಬರೋದಿಲ್ಲ. ನಂದಣ್ಣ ಎಂತಾ ಚೆಂದ ಹಾಡು ಹೇಳಿಕೊಡತಾನ!

ಕೇರಿಯ ಹಿರಿಯ:— ಅಯ್ಯೋ, ಕೆಟ್ಟಮಕದ ಹುಡುಗೀ! ಬಾರೇ ಬಾರೇ! ಭೂತ ಭೂತ, ಅಯ್ಯೋ ನಮ್ಮ ಕೇರಿಗೆ ಸಾವನ್ನು ತರುವ ಭೂತ (ಎಂದು ಕೂಗುತ್ತ ಹೋಗುವನು.)

**ನಂದ:—** ಭೂತಗಳಿಗೆಲ್ಲ ನಾಥನು ನನ್ನ ಶಿವ! ಆತನ ಭಕ್ತರನ್ನು ಯಾವ ಭೂತ ಹಿಡಿದು ಏನು ಸುಖ ಸುರಿದೀತು! ಅಯ್ಯೋ, ನಮ್ಮ ಜನರ ಅಜ್ಞಾನವೇ! ಈ ಭೂತದ ಕಾರಣವಾಗಿ ಎಷ್ಟು ಜೀವಿಗಳು ಬಲಿಯಾಗಿ ತಮ್ಮ ಬಾಳನ್ನು ನೀಗಬೇಕೋ!

**ಬೆಳ್ಳಿ:—** ಹೌದು ನಂದಣ್ಣಾ! ಕಳೆದ ಮಳೆಗಾಲದೊಳಗೆ ನನಗೆ ಸ್ವಲ್ಪ ಮೈ ಬಿಸಿಯಾಯಿತು. ಎರಡು ದಿನ ಮಲಗಿಕೊಂಡಿದ್ದೆ. ಪೂಜಾರಿ ಬಂದು ಏನೇನೋ ಕಣಿ ಹೇಳಿದ. ನಮ್ಮ ಅಜ್ಜಯ್ಯ....ಪಾಪ, ನಮ್ಮ ಎಳೆಯ ಮೇಕೇಮರೀನ....ತೂರಿತ್ತೂಂಡಿಗೆ ಕಡಿದು ಬಲಿ ಒಪ್ಪಿಸಿದ! ಎಂತಾ ಒಳ್ಳೆಯ ಮರಿ ಅಂತೀ ಅದು! ನನ್ನ ಜೀವದ ಗೆಳತಿ ಇದ್ದಾಂಗ ಇತ್ತು!

**ಪಣಿಯ** (ಇನ್ನೊಬ್ಬ ಹುಡುಗ) ಹೌದು ನೋಡು ನಂದಾ! ನಮ್ಮ ದೇವರು ಎಂತಾವಪ್ಪಾ ಇವು! ಮೊನ್ನೆಯ ಅಮಾಸೀ ದಿನ, ಕಾಟ್ಟೇರಿ ಹರಕೀ ಸಲುವಾಗಿ, ಐದು ಕೋಳಿಗಳನ್ನ ಕೊಯ್ದು ಚೆಲ್ಲಿದರು! ನೆತ್ತರ ಹಳ್ಳವಾಗಿ ಹರೀತು; ನಾನು ದಿನಾಲು ಆ ಕೋಳಿಗಳ ಕೂಡ ಎಷ್ಟೊಂದು ಆಟ ಆಡತಿದ್ದೆ ಅಂತೀ! ಆ ಪೂಜಾರಿಗೇನು? ತನ್ನ ಹೊಟ್ಟೆಗೆ ಹೊಸ ಹೊಸ ಮಾಂಸ ಬೇಕಾಯಿತಂದರೆ, ನಮ್ಮ ಹಿರಿಯರಿಗೆಲ್ಲಾ ಇಲ್ಲದ ಸಲ್ಲದ ಹರಕೀ ಒಪ್ಪಿಸಲಿಕ್ಕೆ ಹೇಳತಾನ.

**ನಂದ:—** ಹಾ! ಈಗ ಅಜ್ಜಯ್ಯ ನಮ್ಮ ಮನೆಗೆ ಹೋದ. ನನ್ನ ತಾಯಿ–ತಂದೆಗಳಿಗೆ ಏನು ಹೇಳುತ್ತಾನೋ ಏನೋ! ಪಾಪ ಅವರು ಏನೂ ತಿಳಿಯದ ಭಾವುಕರು. ಅಯ್ಯೋ, ಮನೆಯಲ್ಲಿ ನಾನು ಸಾಕಿದ ಎಳೆಯ ಮೇಕೆಯಿದೆ. ನನಗಾಗಿ ಅದರ ಕೊಲೆಯಾಗುವುದು ಬೇಡ! ಈಗಲೇ ಮನೆಗೆ ಹೋಗೋಣ ನಡೆಯಿರಿ! ಹೂಂ, ಹೇಳಿರಿ:

(ಎಲ್ಲರೂ ಕೂಡಿ ಭಜನೆಯ ಹಾಡು ಹೇಳುತ್ತ ಮುಂದುವರಿಯುವರು.)

“ ಶಿವಶಂಕರ ಶಿವಶಂಕರ ಶಿವಹರ ಗೌರೀರಮಣಾ!
ಭವಭಯಹರ ಗಂಗಾಧರ ಪತಿತಜೀವಸಂತರಣಾ! ”

## ೨ನೆಯ ದೃಶ್ಯ

(ಮುಂದೆ ಮೂರು ದಿನಗಳ ತರುವಾಯ, ಬೆಳಗಿನ ಎರಡನೆಯ ಪ್ರಹರದ ಒಂದೆರಡು ಗಳಿಗೆ ಕಳೆದಿವೆ. ನಂದನ ಮನೆಯಲ್ಲಿ ಆತನ ತಾಯಿ, ಕುರಿಯು ಕರುಳಿನ

ಪದರನ್ನು ಹುರಿಗೊಳಿಸುತ್ತ ಕುಳಿತಿದ್ದಾಳೆ. "ಶಿವಶಂಕರ ಶಿವಶಂಕರ ಶಿವಹರ ಗೌರೀ-ರಮಣಾ" ಎಂದು ಗುಣು-ಗುಣಿಸುತ್ತ ಬೆಳ್ಳಿ ಬರುವಳು.)

**ಬೆಳ್ಳಿ:—** ನಂದಣ್ಣ ಎಲ್ಲಿ ಕಾಣೋದಿಲ್ಲ ದೊಡ್ಡಮ್ಮಾ—

**ನಂದನ ತಾಯಿ:—** ಆತ, ಅಯ್ಯನವರ ಮನಿಗೆ ಕೆಲಸಕ್ಕೆ ಹೋಗ್ಯಾನ ಬೆಳ್ಳಿ! ಬಾ ಅಮ್ಮಾ, ಕೂತುಕೋ—

**ಬೆಳ್ಳಿ:—** (ಕೂತುಕೊಂಡು) ಇದೇನು ಮಾಡ್ತೀ ದೊಡ್ಡಮ್ಮಾ?

**ನಂದನ ತಾಯಿ:—** ಇದು ಬೆಸೆ, ಗೊತ್ತಿಲ್ಲವೇ ಬೆಳ್ಳಿ? ದೇವಾಲ-ಲಕ್ಕೆ ಕೊಡಬೇಕಲ್ಲ....ಅಲ್ಲಿಯ ವೀಣೆ, ಸಾರಂಗಿ ಇವುಗಳಿಗೆಲ್ಲಾ ಬೇಕಾಗುವ ಬೆಸೆ ನಾವೇ ಕೊಡಬೇಕಲ್ಲಾ? ಮೊನ್ನೆ ನಂದಣ್ಣನ ಭೂತಕ್ಕಾಗಿ ಮುನಿ-ಯನಿಗೆ ಬಲಿ ಸಲ್ಲಿಸಿದೆವಲ್ಲ!.... ಆ ಮೇಕೆಯ ಕರುಳಿನ ಹುರಿಯಿದು. ದೇವಾಲಯದ ವೀಣೆಗೆ ಬಾಳ ಹದ ಆಗ್ತದೆ ನೋಡು, ಬೆಳ್ಳಿ!

**ಬೆಳ್ಳಿ:—** ಪಾಪ! ನಂದಣ್ಣ ಬ್ಯಾಡ ಬ್ಯಾಡ ಅಂತ ಎಷ್ಟು ಅತ್ತು ಕರೆದು ಹೇಳಿದರೂ ನೀವು ಕೇಳಲಿಲ್ಲ; ಅವನ ಪ್ರೀತಿಯ ಮರೀನ ನೀವು ಕೊಂದು ಹಾಕೇ ಬಿಟ್ಟರಿ!

**ನಂದನ ತಾಯಿ:—** ಒಳಿತು! ಒಳಿತು! ಹಾಗೆ ಹೇಳಬಾರದಮ್ಮಾ! ಬಲಿ ಸಲ್ಲಿಸಿಕೊಂಡ ಮಾರಿಮುನಿಯ ಕೋಪ ಮಾಡ್ತಾನೆ. ನಂದಣ್ಣನಿಗೆ ಎಂತಾ ಭೂತ ಹಿಡಿದದೆಯೋ! ತನ್ನ ಮೇಕೆಯ ಸಲುವಾಗಿ, ಈಗ ಮೂರು ದಿನ ಆಯ್ತು, ಉಂಡಿಲ್ಲ-ತಿಂದಿಲ್ಲ. ಬರೀ ಹೊಟ್ಟೆಯಿಂದಲೇನೇ ಕೆಲಸಕ್ಕೆ ಹೋಗ್ಯಾನೆ.

(ದೂರದಿಂದ ನಂದನ ಶಿವಭಜನೆ ಕೇಳಿಸುವುದು.)

" ಶಿವಶಿವ ಶಂಕರ ಗೌರೀಶಾ!
ಭವಬಂಧನವೃಂದವಿನಾಶಾ!
ದೀನ ಜನೋದ್ಧರ ಜಗದೀಶಾ!
ಭಾನುಕೋಟಿ ಸಮಸಂಕಾಶಾ!

**ಬೆಳ್ಳಿ:—** (ಸಂಭ್ರಮದಿಂದ) ದೊಡ್ಡಮ್ಮಾ, ನಂದಣ್ಣನ ಹಾಡಿನ ದನಿ ಅಲ್ಲವೇ ಇದು? ಹೌದು ಹೌದು. ನಂದಣ್ಣ ಬಂದ! ನಾನು ಎದುರಿಗೆ ಹೋಗಿ ಆತನ್ನ ಕರಕೊಂಡು ಬರ್ತೀನಿ ತಡೀ, ದೊಡ್ಡಮ್ಮಾ! (ಹೋಗುವಳು)

(ಭಜನೆಯ ಧ್ವನಿ ಹತ್ತಿರ ಹತ್ತಿರ ಬಂದಂತೆ ಕೇಳತೊಡಗುವುದು. ಆರ್ಧ ನಿಮಿಷ ಭಜನೆ ಹಾಗೆಯೇ ಸಾಗಿರುವಾಗ, ಬೆಳ್ಳಿ ಓಡುತ್ತೋಡುತ್ತ ನಂದನ ತಾಯಿಯ ಹತ್ತಿರ ಬರುವಳು. ಗಾಬರಿಯ ಧ್ವನಿಯಲ್ಲಿ ಹೇಳಲು ತೊಡಗುವಳು.)

ಬೆಳ್ಳಿ:— ದೊಡ್ಡಮ್ಮಾ !....ನಂದಣ್ಣ !....ತಲೆ ಮುಖಾ ಎಲ್ಲಾ ಒಡೆದು ಹೋಗಿದೆ....ಮೈತುಂಬಾ ನೆತ್ತರ....! ಅಯ್ಯೋ ನಂದಣ್ಣ !.... ದೊಡ್ಡಮ್ಮಾ, ನಂದಣ್ಣನ್ನ ನೋಡಬಾರೆ !

ನಂದನ ತಾಯಿ:— (ಗಾಬರಿಯ ಧ್ವನಿಯಲ್ಲಿ) ಏನು ? ತಲೆ ಒಡೆದಿದೆ !....ಮೈತುಂಬ ನೆತ್ತರ....! ಅಯ್ಯೋ ನನ್ನ ಕಂದಾ ! (ಒಮ್ಮೆಲೆ ಎದ್ದು ಹೊರಡುವಳು)

(ಭಜನೆಯ ಸಪ್ಪಳ ಹತ್ತಿರದಲ್ಲಿಯೇ ಕೇಳಿಸುವುದು.)

ಶಿವಶಿವ ಶಂಕರ ಗೌರೀಶಾ !
ಭವಬಂಧನವೃಂದವಿನಾಶಾ !
ದೀನಜನೋದ್ಧರ ಜಗದೀಶಾ !
ಭಾನುಕೋಟಿ ಸಮಸಂಕಾಶಾ !

ನಂದನ ತಾಯಿ:— (ಅಳುವಿನೊಂದಿಗೆ) ಅಯ್ಯೋ ಮಗು !.... ಏನಾಯ್ತು ನಂದಣ್ಣಾ !....ಇದೇನು ನಿನ್ನ ಸ್ಥಿತಿ ! ಅಯ್ಯೋ ! ಮೈಯೆಲ್ಲಾ ನೆತ್ತರು !....ತಾಯಿ, ತೂರಿತ್ತುಂಡೀ ! ಇದೇನವ್ವಾ ಯಾಕೆ ಇಷ್ಟೊಂದು ಕೋಪ ! ಅಯ್ಯೋ....ಹಯ್ಯೋ !

(ಭಜನೆಯ ಧ್ವನಿ ಒಮ್ಮೆಲೆ ತಣ್ಣಗಾಗುವುದು. ಪಣಿಯನೆಂಬ ಹುಡುಗ ಹೇಳಲು ತೊಡಗುವನು.)

ಪಣಿಯ:— ಅಯ್ಯಗಳ ಮಗನಮ್ಮಾ ! ಆತ ಹಿಡಿಗಲ್ಲಿಂದ ಒಗೆದು, ನಂದಣ್ಣನ ಮಕಾ ತಲಿ....ಎಲ್ಲಾ ಒಡೆದುಬಿಟ್ಟ. ಆತನ ಕೈಗೆ ಕರೇ ನಾಗ ಕಚ್ಚಲಿ !

ನಂದ:— ಹಾಂಗೆ ಶಾಪದ ಮಾತು ಹೇಳಬಾರದು ಪಣಿಯಾ ! ಎಲ್ಲವೂ ಆ ಲೋಕನಾಥನ ಲೀಲೆ ! ಎಲ್ಲವನ್ನೂ ಮಾಡುವವ, ಮಾಡಿಸುವವ ಆ ಸೂತ್ರಧಾರಿ ಸದಾಶಿವ !

ನಂದನ ತಾಯಿ:— ಅಯ್ಯೋ, ಇವನಿಗೊಂದು ಯಾವಾಗಲೂ ಸದಾಶಿವನ ಧ್ಯಾನ! ಏನಾಯ್ತು ಪಣಿಯ! ಅಯ್ಯಗಳ ಮಗ ನಂದನನ್ನ ಯಾಕೆ ಕಲ್ಲಿನಿಂದ ಹೊಡೆದ? ಅಯ್ಯೋ, ಎಷ್ಟು ನೆತ್ತರ ಇದು!

ಪಣಿಯ:— ಅಯ್ಯಗಳ ಮಕ್ಕಳೆಲ್ಲ ಸೇರಿ ಚಿಣ್ಣಿಯಾಟ ಆಡುತ್ತಿದ್ದರು. ನಾವೆಲ್ಲಾ ನೋಡತಾ ಅಲ್ಲೇ ನಿಂತಿದ್ದೆವು. ಆಡುವಾಗ ಚಿಣ್ಣಿ ಹೋಗಿ ದೂರ ಪೊದೆಯೊಳಗೆ ಬಿತ್ತು. ಅದನ್ನ ತರಲಿಕ್ಕೆ ನಿಮ್ಮ ಯಜಮಾನ ಅಯ್ಯಗಳ ಮಗ ಸುಬ್ಬಣ್ಣವರು ಇಲ್ಲವೆ?— ಅವರು ಓಡತಾ ಹೋದರು. ಚಿಣ್ಣೀನ ತಕ್ಕೊಳ್ಳುವಾಗ ಜೋಲಿತಪ್ಪಿ ಪಕ್ಕದ ಮುಳ್ಳುಕಂಟೆಯಲ್ಲಿ ಬಿದ್ದುಬಿಟ್ಟರು. ಕೊಳಚೇಲಿ ಕಾಲು ಸಿಕ್ಕಿಕೊಂಡು ಒದ್ದಾಡತೊಡಗಿದರು. ಅವರನ್ನ ತಗೀಲಿಕ್ಕೆ ಯಾರೂ ಮುಂದಾಗಲಿಲ್ಲಮ್ಮಾ!

ನಂದನ ತಾಯಿ:— (ಗಾಬರಿಯ ಧ್ವನಿಯಲ್ಲಿ) ಅಮ್ಮಯ್ಯಾ, ಆ ಮೇಲೆ ಏನಾಯ್ತು ಪಣಿಯ?

ಪಣಿಯ:— ಆಗ ನಂದಣ್ಣ ಅವರನ್ನ ಎತ್ತಿ ತೆಗೆಯಬೇಕಂತ ಓಡಿ ಓಡಿ ಹೋದ! ಆದರೆ, ಆ ಅಯ್ಯನಿಗೆ ತಾನು ಮುಳ್ಳುಕೊಳಚ್ಚೇಲಿ ಬಿದ್ದು ಸಂಕಟ ಪಡೂದು ಲೆಕ್ಕಕ್ಕೆ ಬರಲಿಲ್ಲ! ಹೊಲೆಯ ನಂದ ತನ್ನನ್ನ ಮುಟ್ಟಿತಾನಂಬೂ ಕಿಚ್ಚಿಗೆ, ಕೈಗೆ ಸಿಕ್ಕಿದ ಕಲ್ಲುಗಳಿಂದ ಒಗೆದು ನಂದಣ್ಣನ ಮಕಕ್ಕೆ ತಲಿಗೆ-ಗಾಯ ಮಾಡಿಬಿಟ್ರು ದೊಡ್ಡಮ್ಮಾ!

ನಂದನ ತಾಯಿ:— (ಅಳುತ್ತಳುತ್ತ) ಅಯ್ಯೋ ಮಗು! ನಂದಣ್ಣಾ, ಆ ಅಯ್ಯಗಳನ್ನ ಯಾಕ ಮುಟ್ಟಲಿಕ್ಕೆ ಹೋಗಿದ್ದೆ ಕಂದಾ! ನೆತ್ತರು ಹರಿಯುತ್ತಲಿದೆ....ಅಕ್ಕಟಾ....ನಿನಗೆ ನೋವು ಇಲ್ಲವೇ ಕಂದಾ!

ನಂದ:— (ಕಿರುನಗೆ ನಗುತ್ತ) ಅಮ್ಮಾ! ನನಗೇನೂ ನೋವಿಲ್ಲ. ಅಳುವುದನ್ನು ನಿಲ್ಲಿಸಮ್ಮಾ ನೀನು!

ನಂದನ ತಾಯಿ:— (ಆಶ್ಚರ್ಯ-ಕಳವಳದ ಧ್ವನಿಯಲ್ಲಿ) ಏನು ನಿನ್ನ ಮಾತು ನಂದಾ? ಇಷ್ಟು ನೆತ್ತರ ಹರಿದರೂ ನೋವಿಲ್ಲವೇ ನಿನಗೆ?

ನಂದ:— (ಸಮಾಧಾನ ಸ್ವರದಲ್ಲಿಯೆ) ಏನು........ನೆತ್ತರ....ಹುಂ,— ನೆತ್ತರ ಹರಿದಿದೆ. ಹೌದು! ಆದರೆ ಇದು ನನ್ನ ನೆತ್ತರಲ್ಲ!

**ನಂದನ ತಾಯಿ:—** (ಆಶ್ಚರ್ಯ ಚಕಿತ ಅಳುದನಿಯಲ್ಲಿ) ಏನು? ನಿನ್ನ ನೆತ್ತರಲ್ಲವೆ? ಹಾಗಾದರೆ ನಿನ್ನ ಮೈಯನ್ನೆಲ್ಲಾ ಮೀಯಿಸಿದ್ದು ಯಾರ ನೆತ್ತರ?

**ನಂದ:—**( ಭಾವಾವಿಷ್ಟನಾಗಿ) ಯಾರ ನೆತ್ತರವೇ ?........ನನ್ನ ಎಳೆಯ ಮೇಕೆಯ ಮರಿಯ ನೆತ್ತರ! ನೀವು ದೇವತೆಗೆ ಬಲಿ ಸಲ್ಲಿಸಿದಿರಲ್ಲ........ಆ ದಿವ್ಯಜೀವದ ನೆತ್ತರ!—ನೋಡಲಿಲ್ಲವೇ ಆ ಮೇಕೆಮರಿಯ ರಕ್ತದ ಬಣ್ಣವನ್ನ! ಅದೂ ಕೆಂಪು—ನನ್ನ ರಕ್ತವೆಂದು ಹೇಳುವಿರಲ್ಲ....ಇದೂ ಕೆಂಪು! ಆ ಬಣ್ಣಕ್ಕೂ ಈ ಬಣ್ಣಕ್ಕೂ ಏನು ವ್ಯತ್ಯಾಸವಿದೆ! ಮೇಕೆಮರಿಯ ರಕ್ತ ಸುರಿದರೆ, ಹರಕೆ ಸಲ್ಲಿಸಿದೆವೆಂಬ ಸಂತೋಷವೇಕೆ? ಈಗ ನನ್ನ ತಲೆಯಿಂದ ರಕ್ತ ಸುರಿದರೆ, ಸಹಿಸಲಾಗದ ಈ ದುಃಖವೇಕೆ ಅಮ್ಮಯ್ಯಾ!

**ನಂದನ ತಾಯಿ:—** (ಅಳುತ್ತ) ಇದೇನು ಮಾತು ನಿನ್ನದು! ನೀನು ನನ್ನ ಮುದ್ದು ಮಗು! ನಿನಗೆ ನೋವಾದರೆ ನನ್ನ ಕರುಳಿಗೆ ಕೊಳ್ಳಿಯಿಕ್ಕಿದಂತಾಗುವುದು ನಂದಣ್ಣಾ!

**ನಂದ:—** ಮೇಕೆಮರಿಯ ತಾಯಿಗೆ ಅದೂ ಮುದ್ದುಮಗು ಅಮ್ಮಾ! ಅದಕ್ಕೆ ನೋವಾದರೆ ಅದರ ತಾಯಕರುಳಿಗೂ ಕೊಳ್ಳಿಯಿಕ್ಕಿದಂತಾಗುವುದು ತಾಯಿಾ!

**ನಂದನ ತಾಯಿ:—** ಅಯ್ಯೋ, ಹಾಳುಭೂತವೇ! ನನ್ನ ಮಗನನ್ನು ಇನ್ನೂ ಬಿಡಲೊಲ್ಲೆಯಾ ನೀನು! ತಾಯಿ! ಚಾಮುಂಡಿ! ಈ ಬಡವಳನ್ನ ಕಣ್ಣು ತೆರೆದು ನೋಡು ದೇವಿ! ನನ್ನ ಮಗನ ಮೈಯಲ್ಲಿಯ ಈ ಹಾರುವರ ಭೂತವನ್ನ ಉಚ್ಚಾಟನಮಾಡು ತಾಯಿಾ!

**ನಂದ:—** ನಿಮ್ಮೆಲ್ಲರನ್ನೂ ಹಿಡಿದಿರುವ ಅಜ್ಞಾನಭೂತವನ್ನು ಬಿಡಿಸೆಂದು, ಆ ಮಹಾಭೂತನಾಥನ ಬಳಿಗೆ ಹೋಗಿ ನಾನೇ ಬೇಡಿಕೊಳ್ಳ-ಬೇಕಾಗಿದೆ! ಏನಿದು ಅಜ್ಞಾನ! ದೇವರು ಜೀವದ ಬಲಿಯನ್ನು ಬಯಸುತ್ತಾನೆಯೇ? ದೇವರು ಸಾಧುಜೀವಿಗಳಾದ ಕುರಿ—ಕೋಳಿಗಳ ನೆತ್ತರ ಸುರಿದು ಜೀವಿಸುತ್ತಾನೆಯೇ? ದಯೆಯ ಮೂರ್ತಿಯಾಗಿರಬೇಕಾದ ದೇವನಿಗೆ ಕ್ರೋಧವೇ? ಮತ್ಸರವೇ? ದ್ವೇಷವೇ? ರಕ್ತದ ಬಾಯಾರಿಕೆಯೇ? ಕರುಣಾಮಯಾ! ಶಂಕರಾ! ಇದೆಂಥಾ ಮಾಯೆ ನಿನ್ನದು?

**ನಂದನ ತಾಯಿ:—** (ಹೆದರಿಕೆಯ ಧ್ವನಿಯಲ್ಲಿ) ಅಯ್ಯೋ, ಭೂತ ಬಡ-ಬಡಿಸುತ್ತದೆ! ಅಯ್ಯಾ, ಸ್ವಾಮಿ, ನಿನ್ನ ಕಾಲಿಗೆ ಬೀಳತೀನಿ....ನನ್ನ ಮಗನ್ನ ಬಿಟ್ಟು ಇನ್ನೆಲ್ಲಿಗಾದರೂ ಹೋಗು ಮಾರಾಯಾ!

**ಬೆಳ್ಳಿ:—** ನಂದಣ್ಣಾ!

**ನಂದ:—** ಗಾಬರಿಯಾಗಬೇಡ ಬೆಳ್ಳಿ! ನಾನು ಭೂತವಲ್ಲ, ಪಿಶಾಚಿ-ಯಲ್ಲ; ನಿತ್ಯದ ನಿನ್ನ ನಂದಣ್ಣನೇ ಇದ್ದೇನೆ ತಂಗಿ! ಅಮ್ಮನ ಮಾತನ್ನು ಕೇಳಿ ಹೆದರಿದೆಯೇನು?

**ಬೆಳ್ಳಿ:—** (ಸಂಭ್ರಮಸ್ವರದಲ್ಲಿ) ನಂದಣ್ಣ! ಹೌದು ನನ್ನ ನಿತ್ಯದ ನಂದಣ್ಣ! (ಹೋಗಿ ಕಾಲಿಗೆ ತಕ್ಕೆ ಬೀಳುವಳು.)

**ನಂದ:—** (ಅವಳ ಹೃದಡವುತ್ತ) ಬೆಳ್ಳಿ, ನಿನಗಿರುವಷ್ಟು ತಿಳಿವಳಿಕೆ ನಮ್ಮ ಕೇರಿಯ ಹಿರಿಯರಿಗಿಲ್ಲ. ನನ್ನ ಜ್ಞಾನಮೂರ್ತಿ ಗಿರಿಜಾನಾಥ, ಎಲ್ಲ-ರಿಗೂ ಜ್ಞಾನವನ್ನು ಕೊಡಲು ಸಮರ್ಥನಿದ್ದಾನೆ. ನಾಳೆಯ ದಿನ ಸೋಮವಾರ, ಗೋರೋಜನ ಕರ್ಪೂರಗಳನ್ನು ಸಲ್ಲಿಸಲಿಕ್ಕೆ ಶಿವಾಲಯಕ್ಕೆ ನಾನು ಹೋಗಲೇಬೇಕು! ಹೋದಾಗ ಆ ಲೋಕನಾಥನನ್ನು ಕಂಡು ಬೇಡಿ ಕೊಳ್ಳುತ್ತೇನೆ. ಲೋಕದ ಜೀವಿಗಳಿಗೆಲ್ಲ ಭಕ್ತಿ-ಜ್ಞಾನಗಳನ್ನು ಕೊಟ್ಟು ಕಾಪಾಡೆಂದು ಮತ್ತೆ ಮತ್ತೆ ಕೇಳಿಕೊಳ್ಳುತ್ತೇನೆ.

**ಬೆಳ್ಳಿ:—** (ಸಲುಗೆಯ ಧ್ವನಿಯಲ್ಲಿ) ನಂದಣ್ಣಾ, ಮುಳ್ಳಲ್ಲಿ ಬಿದ್ದವನನ್ನ ತೆಗೆಯಲಿಕ್ಕೆ ಹೋದರೂ, ಆ ಕೆಟ್ಟ ಅಯ್ಯ ನಿನಗೆ ಕಲ್ಲಿನಿಂದ ಹೊಡೆಯ-ಬೇಕೆ?

**ನಂದ:—** ನಾವು ಹೊಲೆಯರು ಬೆಳ್ಳಿ! ನಮ್ಮನ್ನ ಮುಟ್ಟಬಾರದು ಎಂಬ ರೂಢಿ ಅವರದು.

**ಬೆಳ್ಳಿ:—** ಇದೇನಪ್ಪಾ ರೂಢಿ! ನಾವು ಮಾಡಿಕೊಟ್ಟ ಭೇರಿ ತಮ್ಮಟೆ ಮುಟ್ಟಿ ಬಾರಿಸಲಿಕ್ಕೆ ಸರಿ. ನಾವು ಕೊಟ್ಟ ಹುರಿಯನ್ನು ಕಟ್ಟಿ ವೀಣೆ-ತಂಬೂರಿ ಬಾರಿಸಲಿಕ್ಕೆ ಸರಿ! ನಾವು ಕೊಟ್ಟ ಗೋರೋಚನ ಕರ್ಪೂರ ಮುಟ್ಟಿ ದೇವರಿಗೆ ಸಲ್ಲಿಸಲಿಕ್ಕೆ ಸರಿ! ಆದರೆ ನಮ್ಮ ಮೈಮುಟ್ಟಿದರೆ ಮಾತ್ರ ಪಾಪವೇನು?

**ನಂದ:—** ಇದೂ ಒಂದು ಮಾಯೆಯ ಆಟ ಬಿಡಿ! ಈ ಮಾಯೆಯ ಬಲೆಯೊಳಗಿಂದ ಪಾರಾಗಬೇಕಾದರೆ, ಆ ಶಿವಭಕ್ತಿಯೊಂದೇ ಸಾಧನೆ! ಹುಂ, ಎಲ್ಲರೂ ಶಿವನ ಭಜನೆ ಮಾಡಿರಿ ನೋಡೋಣ! ಅಮ್ಮಾ ನೀನೂ ನಮ್ಮೊಂದಿಗೆ ಕೂಡು!

ಶಿವಶಂಕರ ಶಿವಶಂಕರ ಶಿವಹರ ಗೌರೀರಮಣಾ!
ಭವಭಯಹರ ಗಂಗಾಧರ ಪತಿತ ಜೀವಸಂತರಣಾ!

(ಎಲ್ಲರೂ ಭಜನೆ ಮಾಡುವರು.)

## ೩ ನೆಯ ದೃಶ್ಯ

ನಂದನ ಮನೆಯ ಪಡಸಾಲೆ. ಸಮಯ ರಾತ್ರಿಯ ಮೊದಲನೆಯ ಜಾವ.' ಕಂಬಳಿಯೊಂದನ್ನು ಹಾಸಿದ್ದು, ಅದರ ಮೇಲೆ ನಂದ ಮಲಗಿಕೊಂಡಿದ್ದಾನೆ. ಕಲ್ಲಿನ ಏಟುಗಳಿಂದ ಮುಖವೆಲ್ಲ ಬಾತುಕೊಂಡಿದೆ. ನೋವಿಗಾಗಿಯೇನೋ, ಮೈಯಲ್ಲಿ ಜ್ವರವೂ ಕಾಣಿಸಿಕೊಂಡಿದೆ. ಶಾಂತಭಾವದಲ್ಲಿಯೇ ನಂದ ಬಿದ್ದುಕೊಂಡಿರುವ. ಬಳಿಯಲ್ಲಿಯೇ ತಾಯಿ ಮುಖ ಬಾಡಿಸಿಕೊಂಡು ಕುಳಿತಿರುವಳು.

**ನಂದ:—** ಮಹಾದೇವಾ! ಜೀವಿಗಳು ಇಂಥ ನೋವುಗಳನ್ನು ಅನುಭವಿಸಲೇಬೇಕೇನು? ನೋವಿಲ್ಲದೆ ಜೀವಿಯ ಮನಸ್ಸು, ಹೃದಯ ಹಣ್ಣಾಗದೇನು? (ನರಳಿದವನಂತೆ) ಶಂಭೋ! ಶಂಕರಾ! ಶುಭಂಕರಾ!

**ನಂದನತಾಯಿ:—** ಯಾಕೆ ನಂಪಾ' ತುಂಬಾ ನೋಯುತ್ತದಲ್ಲವೇ? ಹಯ್ಯೋ, ಎಂತಹ ಗಾಯಗಳಿವು! ಆ ಕಲ್ಲೆಡೆಯವನಿಗೆ ಕರುಣೆಯೇ ಇರಲಿಲ್ಲವೇ?

**ನಂದ:—** ನನ್ನ ಮೈಗೆ ಏನೂ ನೋವಿಲ್ಲ ಅಮ್ಮಾ! ಹೃದಯ ನೋವಿನಿಂದ ನರಳುತ್ತಲಿದೆ. ನನ್ನ ಹೃದಯಕ್ಕೆ ಎಲ್ಲರೂ ಏಟು ಹಾಕುತ್ತಲಿದ್ದಾರೆ. ಆ ಏಟುಗಳ ಮುಂದೆ ಸುಬ್ಬಯ್ಯ ಚಿಕ್ಕೊಡೆಯರ ಕಲ್ಲಿನ ಏಟಿನ ಬೆಲೆಯೇನು ತಾಯಿ? ಪರಮಾತ್ಮನ ಈ ಲೀಲಾಭೂಮಿಯಲ್ಲಿ ಅಜ್ಞಾನದ ಭೂತಾಟಿಕೆ ನಡೆದಿದೆ. ಕಾರಣವಿಲ್ಲದೆ ಮಾನವ, ಬಲಿಯೆಂದು ದೇವನಿರ್ಮಿತ ಜೀವಗಳನ್ನು ಕೊಲ್ಲುತ್ತಲಿದ್ದಾನೆ. ಕಾರಣವಿಲ್ಲದೆ ಮಾನವನು ಮಾನವನನ್ನೇ ಮುಟ್ಟಲಾರದ ವಿಷವನ್ನಾಗಿ ತಿಳಿದುಕೊಂಡಿದ್ದಾನೆ. ಪ್ರೀತಿ-ಭಕ್ತಿಗಳ

ಸಮತೆಯ ಲೋಕದಲ್ಲಿ, ದ್ವೇಷ–ಆಶೆಗಳು ಎಂಥ ವಿಷಮತೆಯನ್ನು ಹುಟ್ಟಿಸಿವೆ ತಾಯಿ!

**ನಂದನ ತಾಯಿ:—** (ಗಾಬರಿಯ ಧ್ವನಿಯಲ್ಲಿ) ನಂದಣ್ಣಾ.... ನಂದಣ್ಣಾ!

**ನಂದ:—** ಯಾಕೆ, ಅಮ್ಮಾ! ಹೀಗೇಕೆ ಕರೆಯುತ್ತಿದ್ದೀ?

**ನಂದನ ತಾಯಿ:—** ನೀನು ನಂದನೇ ಅಹುದೋ ಅಲ್ಲವೋ? ನೀನು ಆಡುತ್ತಿರುವುದರೊಳಗೆ ಒಂದು ಮಾತಿನ ಅರ್ಥವೂ ನನಗ ಆಗತಾ. ಇಲ್ಲ ಮಗು!

**ನಂದ:—** ಅಮ್ಮಾ, ನಿನ್ನ ಬಸಿರಿಂದ ಬಂದ ನಿನ್ನ ನಚ್ಚಿನ ಮಗ ನಂದನೇ ನಾನು ತಾಯೀ! ಈ ಲೋಕದಲ್ಲಿ ಹೃದಯದ ಮಾತನ್ನ ದೈವದ ವಾಣಿಯನ್ನ–ಅರ್ಥ ಮಾಡಿಕೊಳ್ಳುವವರೇ ಇಲ್ಲ. ಅದರ ಅರ್ಥ ಮಾಡಿಕೊಳ್ಳುವವರು ಹೆಚ್ಚಾದರೇನೇ ಲೋಕವನ್ನು ಹಿಡಿದಿದ್ದ ಮಾಯೆಯ ಮಹಾಭೂತ ಬಿಟ್ಟುಹೋಗುವುದು! ಅಮ್ಮಾ, ಶಿವನ ಭಕ್ತಿಯೊಂದೇ ಇದಕ್ಕೆ ಶ್ರೇಷ್ಠ ಸಾಧನ! ಭಕ್ತಿಸಾಧ್ಯನಾದ ನನ್ನ ಶಿವನಿಗೆ ಯಾವ ಬಲಿಯೂ ಬೇಕಾಗಿಲ್ಲ; ಯಾವ ಕೋಲವೂ ಬೇಕಾಗಿಲ್ಲ.

(ಒಮ್ಮೆಲೆ ಕೇರಿಯ ಹಿರಿಯ, ಪೂಜಾರಿ ಅಲ್ಲಿಗೆ ಬರುವರು.)

**ಕೇರಿಯ ಹಿರಿಯ:—** (ಕೋಪಾವಿಷ್ಟನಾಗಿ) ಯಾವ ಬಲಿಯೂ ಬೇಕಾಗಿಲ್ಲ!........ಯಾವ ಕೋಲವೂ ಬೇಕಾಗಿಲ್ಲ! ಪಾಪಿ ದೆವ್ವವೇ, ನಿನ್ನಿಂದ ಕೇರಿಗೆ ಅಳಿಗಾಲ ಬಂದು ಕುಳಿತದೆ ನೋಡು!

**ಪೂಜಾರಿ:—** ನಮ್ಮ ಕೇರಿಯನ್ನು ಕಾಯಬೇಕಾದ ಎಲ್ಲ ದೇವರುಗಳೂ ಕ್ರೋಧದಿಂದ ಕೆಂಡವನ್ನೇ ಕಾರತೊಡಗಿವೆ.

**ನಂದ:—** ಏನಾಗಿದೆಯೀಗ ಅಜ್ಜಯ್ಯಾ? ಏನಾಯಿತೀಗ ಪೂಜಾರಣ್ಣಾ?

**ಪೂಜಾರಿ:—** ಇನ್ನೇನಾಗಬೇಕೂ ಅಂತೀಯಾ? ಕೇರಿಯ ಯಾವ ಮನೆಗೂ ಹೋಗಿ ನೋಡು: ಪ್ರತಿಯೊಂದು ಮನೆಯಲ್ಲಿಯೂ ಇಬ್ಬರು ಮೂವರು ಹಾಸಿಗೆ ಹಿಡಿದಿದ್ದಾರೆ. ಎಲ್ಲರಿಗೂ ಬೆಂಕಿಯಂಥಾ ಜ್ವರ. ಮಾರಿಮುನಿಯ ಮುನಿದುಕೊಂಡಿದ್ದಾನೆ. ಇದಕ್ಕೆಲ್ಲಾ ನಿನ್ನ ಮಗನೇ ಕಾರಣ ಕಾಳಮ್ಮಾ!

**ಕಾಳಮ್ಮ:—** (ನಂದನ ತಾಯಿ-ಕರುಣಾಸ್ವರದಲ್ಲಿ) ಅಯ್ಯೋ, ಇನ್ನೇನು ಗತಿ ದೇವರೇ ! (ನಿಟ್ಟುಸಿರಿಡುವಳು.)

**ನಂದ:—** ಅಜ್ಜಯ್ಯಾ, ಪೂಜಾರಣ್ಣಾ ! ಸ್ವಲ್ಪ ತಿಳಿವಳಿಕೆಯಿಂದ ಮಾತನಾಡಿರಿ ! ಮನುಷ್ಯ ಮನುಷ್ಯರಂತೆ ಬದುಕಬೇಕು ! ಮನುಷ್ಯ ಜ್ಞಾನವಿಲ್ಲದ ಹಕ್ಕಿ–ಹುಳುವಲ್ಲ ! ಕೇರಿಯ ಜನವೆಲ್ಲ ಮೊನ್ನೆಯ ದಿನ ಮುದುವೆಟ್ಟನ ಕೋಲಕ್ಕೆ ಹೋಗಿದ್ದರಲ್ಲವೇ ? ಅಲ್ಲಿ ಮೂರು ದಿನದ ಕೊಳೆತ ದುರ್ಮಾಂಸವನ್ನು ಹೊಟ್ಟೆ ಹಿಡಿಸಲಾರದಷ್ಟು ನುಂಗಿಬಂದರಲ್ಲವೆ ? ಇದು ಮನುಷ್ಯರ ರೀತಿಯೇ ? ಕೊಳಕುಮಾಂಸ ವಿಷವಾಗಿ ಪರಿಣಮಿಸಲೇ ಬೇಕು. ಪೂಜಾರಣ್ಣಾ ! ಅದರ ವಿಷವೇ ಕೇರಿಯಲ್ಲಿ ಜ್ವರವನ್ನು ಹಬ್ಬಿಸಿದೆ !

**ಪೂಜಾರಿ:—** ಕೇಳಿದೆಯೇನಪ್ಪಾ ಈ ಮಂಕನ ಮಾತುಗಳನ್ನ ! ತೂರಿತ್ತುಂಡಿ ತಾಯಿಯ ಪ್ರಸಾದ ವಿಷಾ ಆಗಿ ಪರಿಣಮಿಸಿತಂತೆ! ಈಗ ಇಲ್ಲಿ ಕೂತು ಮಾತು ಬೆಳಸಿ ಉಪಯೋಗವಿಲ್ಲ ! ನಡಿ ಅಜ್ಜಾ, ನಾಳೆಯ ಅಮಾಸಿಯ ದಿನ, ಕೇರಿಯ ಎಲ್ಲ ಮನಿಯವರೂ ಮಾರಿಮುನಿಯಂಗೆ ಒಂದೊಂದು ಬಲಿಯನ್ನು ಒಪ್ಪಿಸುವಂತೆ ಡಂಗುರ ಹಾಕಿಸು ! ಈ ಭೂತದ ಕೂಡ ಇನ್ನು ಮಾತೇ ಬೇಡ ! ಏಳಿನ್ನು ಹೋಗೋಣ ! (ಇಬ್ಬರೂ ಹೊರಡುವರು.)

**ನಂದನ ತಾಯಿ:—** ಅಯ್ಯೋ ! ನನ್ನ ನಂದನಿಗೆ ಇನ್ನೇನು ಗತಿ ? ಏನು ಮಾಡಲಿ ನಾನು ?

**ನಂದ:—** ಅಮ್ಮಾ, ಹೆದರಬೇಡ ! ಎಲ್ಲರಿಗೂ ಗತಿಯಾಗಿ ನನ್ನ ಕೈಲಾಸನಾಥನಿದ್ದಾನೆ. ನಿನ್ನ ನಂದನಿಗೆ ಏನೂ ಆಗುವುದಿಲ್ಲ ತಾಯಿ ! ಅದೋ ನೋಡು, ಆತ ನನ್ನನ್ನು ಕೈಮಾಡಿ ಕರೆಯುತ್ತಲಿದ್ದಾನೆ. ನಾನು ತಿರುಪ್ಪಂಕೂರಿಗೆ ಬರಬೇಕಂತೆ ! (ಒಮ್ಮೆಲೆ ದಿಗ್ಗನೆ ಎದ್ದು ಕುಳಿತು) ಓ ! ನನ್ನ ತಲೆಗೆ ಇದೆಂಥ ದಿವ್ಯವಸ್ತುವಿನ ಸೋಂಕು ! ಎಂದೂ ಕಾಣದ ಸುಖ–ಶಾಂತಿಯ ಅನುಭೂತಿ ! ಅಮ್ಮಾ ಇದು ನೋಡು, ನನ್ನ ತಲೆಯ–ಮುಖದ–ನೋವುಗಳೆಲ್ಲಾ ಅಡಗಿ ಹೋದುವು ! ನನ್ನ ಮೈಯನ್ನು ಮುಟ್ಟಿ ನೋಡು, ಜ್ವರವೆಲ್ಲ ತಣ್ಣಗಾದುವು. ಭವರೋಗ ವೈದ್ಯ ! ನಿನ್ನ ಕರುಣೆಯ ಎದುರು ಈ ನೋವು, ಬೇನೆ ನಿಂತು ಕಾಡಲು ಸಮರ್ಥವಾಗುವುವೆ ? ಅಮ್ಮಾ !

ಶಂಕರನು ಲೋಕಕೆ ಶುಭಂಕರನು ಸುಖದಾನಿ !
ಮಂಕುಗಳಿಗವನ ಮಹಿಮೆಯು ತಿಳಿಯದೆ !
ಶಂಕೆಯನು ತಾಳದಿರು, ಶಂಕರನ ಪದ ನಂಬು
ಕಿಂಕೃತಿಯು ನಿನಗೆಂದು ಪೀಡೆ ಕೊಡದೆ !
ಮುನಿಯನವ ಮುಳಿಯನವ ಕೆರಳನವನೆಂದು....
ಮುನಿಮನೋಮಂದಾರ ಕರುಣರಸಸಿಂಧು !

**ನಂದನ ತಾಯಿ:—** ಯಾವುದೂ ನನಗೆ ತಿಳಿಯಲಾಗಿದೆ ನಂದಾ ! ಯಾರ ಮಾತನ್ನು ಸತ್ಯವೆಂದು ನಂಬಬೇಕು ನಾನು? ಕಂಗೆಟ್ಟು ಹೋಗಿದ್ದೇನೆ !

**ನಂದ:—** ನಾಳೆಯ ದಿನವೇ ಅಮ್ಮಾ !....ನಾಳೆಯ ನೇಸರು ಮೂಡಿದ ಕೂಡಲೇ !....ಲೋಕಕ್ಕೆ ಹೊಸ ಬೆಳಕು! ಆ ಬೆಳಕಿಗಾಗಿ ಸೂರ್ಯ-ಚಂದ್ರರೇ ಕಣ್ಣಾಗಿರುವ ನನ್ನ ಸದಾಶಿವ ನನ್ನನ್ನು ಕರೆದಿದ್ದಾನೆ. ಆತನ ಬೆಳಕು ಕಂಗೆಟ್ಟವರಿಗೆಲ್ಲ ದಾರಿತೋರಿಸುವುದು! ಇದೋ, ನಾನು ಹೊರಟೆ. ತಿರುಪ್ಪಂಕೂರಿಗೆ ಇಂದಿನಿರುಳೇ ಹೋಗಬೇಕು. ಕೊಡಮ್ಮಾ ಆ ದಯಾಘನನಿಗೆ ನಿವೇದಿಸಲು ಹಣ್ಣು-ಕಾಯಿ ಕೊಡು ! ಕರ್ಪೂರ-ಗೋರೋಚನ ಕೊಡು ! ಆ ಗಾನಲೋಲನ ವಾದ್ಯಗಳಿಗಾಗಿ ಹದಗೊಳಿಸಿದ ಚರ್ಮಗಳನ್ನು ಕೊಡು ! ಭಕ್ತಿಯ ಕಾಣಿಕೆಯೆಂದು ಒಪ್ಪಿಸುತ್ತೇನೆ. ನಿನ್ನ ಕಲ್ಯಾಣಕ್ಕಾಗಿ—ಎಲ್ಲರ ಕಲ್ಯಾಣಕ್ಕಾಗಿ—ಆ ಕಲ್ಯಾಣಮೂರ್ತಿಯನ್ನು ಬೇಡಿಕೊಳ್ಳುತ್ತೇನೆ. ಇದೋ ಹೊರಟೆ........ಹೊರಟೆ ! (ಹೊರಡುವನು.)

**ನಂದನ ತಾಯಿ:—** ನಂದಾ, ನಂದಣ್ಣಾ ! ನಿನಗೆ ದಾರಿಯಲ್ಲಿ ಎಲ್ಲ ರೀತಿಯಿಂದಲೂ ಸುಖವಾಗಲಿ ಕಂದಾ !

( ಎಂದು ಹರಸುತ್ತಿರುವಾಗಲೇ ದೂರದಲ್ಲಿ ನಂದನ ಭಜನೆಯು ಧ್ವನಿ ಕೇಳುವುದು. )

"ಶಿವಶಿವ ಶಂಕರ ಗೌರೀಶಾ !
ಭವಬಂಧನವೃಂದವಿನಾಶಾ !
ದೀನ ಜನೋದ್ಧರ ಜಗದೀಶಾ !
ಭಾನುಕೋಟಿ ಸಮಸಂಕಾಶಾ !"

## ೪ ನೆಯ ದೃಶ್ಯ

(ತಿರುಪ್ಪಂಕೊರಿನ ಪ್ರಾಚೀನ ಶಿವದೇವಾಲಯ. ಸೋಮವಾರದ ಪ್ರಥಮ ಯಾಮದ ಪೂಜೆ ದೇವಾಲಯದಲ್ಲಿ ನಡೆದಿದೆ. ಪಾರುಪತ್ಯಗಾರನ ಚಾವಡಿಯ ಎದುರು, ನಂದ ಬಂದು ದೂರದಲ್ಲಿ ನಿಂತುಕೊಂಡಿದ್ದಾನೆ. ಅವನ ಹಿಂದೆ ಅವನ ಅನುಯಾಯಿ-ತರುಣರ ತಂಡವೂ ಇದೆ. ಎಲ್ಲರ ಕೊರಳಲ್ಲಿಯೂ ರುದ್ರಾಕ್ಷಮಾಲೆ. ಹಣೆಯಲ್ಲಿ ಭಸಿತ; ಹೊಲೆಯರೆಂದು ಯಾರೂ ಗುರುತಿಸದಂತಹ ಸಾತ್ತ್ವಿಕ ತೇಜಸ್ಸು ಅವರೆಲ್ಲರ ಮುಖದ ಮೇಲೆ, ಪಾರುಪತ್ಯಗಾರನನ್ನು ಕಂಡು ಆದರದಿಂದ ವಂದಿಸಿ ನಂದ ಮಾತಾಡುತ್ತಾನೆ.)

**ನಂದ:—** ನಾವು ಆದನೂರಿನ ಕೇರಿಯವರು ಅಯ್ಯನವರೆ! ಸ್ವಾಮಿಗೆ ನಮ್ಮ ಕುಲಗಾಣಿಕೆ ಒಪ್ಪಿಸಲು ಬಂದಿದ್ದೇವೆ!

**ಪಾರು:—** ಏನು? ನೀವು ಹೊಲೆಯರ ಮಕ್ಕಳೇ? ಇದೇನು ನಿಮ್ಮ ಸೋಗು? ಎಲ್ಲರೂ ಶಿವಭಕ್ತರಾಗಿ ಬಿಟ್ಟಿದ್ದೀರಲ್ಲ!

**ನಂದ:—** ಲೋಕಕ್ಕೆ ಒಬ್ಬನೇ ಒಬ್ಬ ಒಡೆಯ ಕೈಲಾಸಪತಿ ಬುದ್ಧಿ; ಲೋಕದ ಜನವೆಲ್ಲ ಶಿವನ ಭಕ್ತರೇ ಅಲ್ಲವೇ ಒಡೆಯಾ?

**ಪಾರು:—** ಈ ಬುದ್ಧಿಯನ್ನು ಯಾರು ನಿಮ್ಮ ತಲೆಯಲ್ಲಿ ಹಾಕಿದ ರಪ್ಪಾ? ನಿಮ್ಮ ಚಂಡಿ, ಮಾರಿ, ಮಸಣಿ, ಕಾಟ್ಟೇರಿ ಇವೆಲ್ಲಾ ನಿಮ್ಮನ್ನ ಸುಮ್ಮನೆ ಬಿಟ್ಟಾವೇನಯ್ಯಾ?

**ನಂದ:—** ಸಾಕ್ಷಾತ್ ಮೃತ್ಯುಂಜಯನ ಮುಂದೆ, ಈ ಚಂಡಿ-ಮಾರಿ-ಮಸಣಿಯರು ಏನು ಮಾಡಿಯಾರು ಒಡೆಯಾ? ಮನುಷ್ಯನಿಗೆ ಹಿರಿಯ ಅರಿವನ್ನು ಹುಟ್ಟಿಸುವ ಶಕ್ತಿ, ಈ ಕಿರುಕುಳ ದೇವತೆಗಳಲ್ಲಿ ಇರುವುದೆ?

**ಪಾರು:—** (ಚಕಿತನಾಗಿ ತನ್ನಲ್ಲಿ) ಅಂ! ಎಷ್ಟೊಂದು ತಿಳಿದವರಂತೆ ಮಾತನಾಡುತ್ತಾನಲ್ಲ ಈ ಹುಡುಗ! (ನಂದನನ್ನು ಕುರಿತು) ಅಯ್ಯಾ, ನಿನ್ನ ಹೆಸರೇನು?

**ನಂದ:—** ಈ ಬಡವನನ್ನು 'ನಂದ' ಎಂದು ಎಲ್ಲರೂ ಕರೆಯುತ್ತಾರೆ.

**ಪಾರು:—** ಓ, ನೀನೆಯೋ ನಂದ! ನಿನ್ನ ವರ್ತಮಾನವನ್ನು ಇತ್ತೀಚೆಗೆ ಆಗಾಗ ಕೇಳುತ್ತಲಿದ್ದೇವೆ. ಆದನೂರಿನ ಕೇರಿಯ ತರುಣರಲ್ಲಿ ನೀನು ಶಿವಭಕ್ತಿಯ ಪ್ರಚಾರ ನಡೆಸಿದ್ದೀಯಂತೆ!

**ನಂದ:—** ಹೊಲೆಯರೂ ಮನುಷ್ಯರೇ ಒಡೆಯಾ? ಮನುಷ್ಯರೆಲ್ಲ ಶಿವಭಕ್ತರಾಗಬೇಕಲ್ಲವೇ ಬುದ್ಧಿ!

**ಪಾರು:—** ಮನುಷ್ಯರೆಲ್ಲ ಶಿವಭಕ್ತರಾಗಬೇಕು........! ನಿನ್ನ ಮಾತು ಸರಿಯಾಗಿದೆ ನಂದಾ! ನಿನ್ನ ಈ ಅರಿವು ನಾಡಿನ ಎಲ್ಲ ಜನರಲ್ಲಿಯೂ ಮೂಡಬೇಕು. ಆಗಲಿ, ನಿನ್ನ ಕಾಣಿಕೆಯೇನು? ಒಂದೊಂದಾಗಿ ಒಪ್ಪಿಸು!

**ನಂದ:—** ಇದೋ, ತೆಗೆದುಕೊಳ್ಳಿರಿ! ಇದು ಶುದ್ಧವಾದ ಗೋರೋ-ಚನ! ಇದು ಅಪ್ಪಟ ಕರ್ಪೂರ! ಇದು ನಮ್ಮಪ್ಪನ ಸಂಗೀತದ ವಾದ್ಯಕ್ಕಾಗಿ ಹುರಿಗೂಡಿಸಿದ ಬೆಸೆ! ಇದು ಹಣ್ಣುಗೊನೆ! ಇವು ತೆಂಗಿನಕಾಯಿ!

**ಪಾರು:—** ಸರಿ! ನಿನ್ನ ಕಾಣಿಕೆ ಸದಾಶಿವನಿಗೆ ಸಂದಾಯವಾಯಿತು. ದೇವಾಲಯದ ಹೊರವಳಯದಲ್ಲಿ ಬಲಗೊಂಡು, ಬಾಗಿಲಲ್ಲಿ ಪೊಡಮಟ್ಟು, ಹೊರಟು ಹೋಗಿಬಿಡಿ!

**ನಂದ:—** (ಕರುಣಾಧ್ವನಿಯಲ್ಲಿ) ನನ್ನ ಸ್ವಾಮಿಯ ಮೂರ್ತಿಯನ್ನು ಕಣ್ಣಾರೆ ಕಾಣಲಾರೆನೇ ನಾನು!

**ಪಾರು:—** ಅದು ಹೇಗೆ ಸಾಧ್ಯ? ನೀವು ಹೊಲೆಯರು ನಂದಾ!

**ನಂದ:—** ಹೊಲೆಯರು ಮಾನವರಲ್ಲವೆ? ಹೊಲೆಯರು ಶಿವಭಕ್ತರಾಗಬಾರದೇ? ಭಕ್ತರಿಗೆ ಆತನ ಸಂದರ್ಶನವು ದೂರದಿಂದಲಾದರೂ ಸಿಕ್ಕಲಾರದೆ?

**ಪಾರು:—** ಹೊಲೆಯರಿಗೆ ಸಿಕ್ಕಲಾರದು ನಂದಾ! ಅದು ಬಹು ಕಾಲದಿಂದ ನಡೆದುಬಂದ ಪರಂಪರೆ!

**ನಂದ:—** (ನಿರಾಶೆಯ ಧ್ವನಿಯಲ್ಲಿ) ಹೊಲೆಯರಿಗೆ ಸಿಕ್ಕಲಾರದು!.... ಹೊಲೆಯರು....ಹೊಲೆಯರೆಂದರೆ ಯಾರು ಅಯ್ಯಗಳೆ!

**ಪಾರು:—** ಇದೇನು ಕೇಳುತ್ತಿರುವಿ ನಂದಾ? ಹೊಲೆಯರ ಕುಲದಲ್ಲಿ ಹುಟ್ಟಿದವರೆಲ್ಲ ಹೊಲೆಯರು!

(ಒಮ್ಮೆಲೇ ಗುಡುಗಿನ ಗರ್ಜನೆ ತಲೆದೋರುವುದು. ಗರ್ಜನೆ ನಿಂತೊಡನೆಯೆ ಇಂಪಾದ ಗಾನವೊಂದು ಕೇಳಲು ತೊಡಗುವುದು.)

"ಹುಸಿಯ ನುಡಿವವ ಹೊಲೆಯ! ಹಿಂಸೆಗೈವವ ಹೊಲೆಯ!
ಹೆಣ್ಣು ಹೊನ್ನುಗಳಿಂಗೆ ಕಣ್ಣನಿಡುವವ ಹೊಲೆಯ!
ಕಪಟ-ವಂಚನೆ ಮೋಸಕೆಡೆಯಾದವನೆ ಹೊಲೆಯ!
ಕ್ರೋಧ ಮತ್ಸರ-ವೈರಕಾಳಾದವನೆ ಹೊಲೆಯ!
ಕುಲಜರಲಿ ಹೊಲೆತನವು ತುಂಬಿರುವುದೈಯಾ!
ಶಿವಭಕ್ತ ಹೊಲೆಯಾಗಿ ಉಳಿವನೇನಯ್ಯಾ?!

ಪಾರು:— (ಬೆರಗುಗೊಂಡು) ಆಂ? ಇದೆಲ್ಲಿಯ ದಿವ್ಯಧ್ವನಿ! ಮುಗಿಲ ಕಡೆಯಿಂದ ಕೇಳುತ್ತಲಿದೆ! ಆಶ್ಚರ್ಯ! ತಡೆ ನಂದಾ! ನಾನು ಮುಖ್ಯ ಅರ್ಚಕರಿಗೆ ಇದನ್ನು ಅರಿಕೆಮಾಡಿ ಬರುತ್ತೇನೆ! ಅವರು ಏನು ಹೇಳುವ-ವರೆಂಬುದನ್ನು ನಿನಗೆ ಕೂಡಲೆ ಬಂದು ತಿಳಿಸುತ್ತೇನೆ.

ನಂದ:— ಇನ್ನೊಂದು ಮಾತನ್ನೂ ಅರಿಕೆ ಮಾಡಿರಿ ಒಡೆಯಾ! ಕೈಲಾಸನಾಥ ಕೈಮಾಡಿ ಕರೆದಿದ್ದಾನೆಂದೇ ನಂದ ಇಂದು ಇಲ್ಲಿಗೆ ಬಂದಿದ್ದಾ-ನೆಂದೂ ತಿಳಿಸಿರಿ!

ಪಾರು:— ಈಗ ಬಂದೆ! ಸ್ವಲ್ಪವೇ ತಾಳು ನಂದಾ! (ಹೋಗುವನು) (ದೇವಾಲಯದ ಗಂಟೆಯ ಶಬ್ದ ಕೇಳುವುದು. ವಾದ್ಯಧ್ವನಿಗಳು.)

ನಂದ:— ಬೆಳ್ಳೀ, ಪಣಿಯ್ಯ, ಒಳಗೆ ನನ್ನ ದೇವನ ಸೇವೆ ನಡಿದಿದೆ. ನಾವೂ ನಮ್ಮ ಭಜನೆಯಿಂದ ದೇವನ ಸೇವೆಯಲ್ಲಿ ಪಾಲುಗಾರರಾಗೋಣವೇ?

ಎಲ್ಲರೂ:— ಆಗಲಿ ನಂದಣ್ಣಾ! ಪ್ರಾರಂಭಮಾಡು ಭಜನೆಯನ್ನ!

(ನಂದ ಮೊದಲು ಹೇಳುವನು. ಮಿಕ್ಕವರು ಹಿಮ್ಮೇಳವಾಗಿ ಹೇಳುವರು.)

ಶಿವಶಂಕರ ಶಿವಶಂಕರ ಶಿವಹರ ಗಿರಿಜಾರಮಣಾ!
ಭವಭಯಹರ ಗಂಗಾಧರ ಪತಿತಜೀವಸಂತರಣಾ!

(ಒಂದೆರಡು ನಿಮಿಷ ಭಜನೆ ನಡೆಯಬೇಕು. ಭಜನೆ ನಡೆದಿರುವಾಗಲೆ ಪಾರುಪತ್ಯಗಾರನು ಮರಳಿ ಬಂದು, ನಂದನನ್ನು ಕೂಗುವನು.)

ಪಾರು:— (ತನ್ನಲ್ಲಿ) ಅಹಹ! ಧನ್ಯ ಧನ್ಯ ನಂದ! ಭಜನೆಯಲ್ಲಿ ಮೈ-ಮರೆತು ಹೋಗಿದ್ದಾನೆ. ಇಂತಹ ಭಕ್ತರು ನಮ್ಮ ಕುಲಜರಲ್ಲಾದರೂ

ಯಾರಾದರೂ ನೋಡಲು ಸಿಕ್ಕುವರೆ ? (ನಂದನಿಗೆ) ನಂದಾ, ನಂದಣ್ಣಾ ! ನಾನು ಮರಳಿ ಬಂದಿದ್ದೇನೆ.

**ನಂದ:—** (ಭಜನೆಯನ್ನು ನಿಲ್ಲಿಸಿ) ಆಂ ?.... ಮರಳಿ ಬಂದಿದ್ದೀರಾ ? ಹುಂ ! ಏನಾಯಿತು ಅಯ್ಯನವರೇ ! ನನ್ನ ಸ್ವಾಮಿಯ ಬಿಂಬವನ್ನು ನಾನು ಕಣ್ಣಾರೆ ಕಾಣಬಹುದೇ ?

**ಪಾರು:—** ನಾನು ಹಿರಿಯ ಅರ್ಚಕರನ್ನು ಕಂಡು ವಿಷಯವನ್ನು ತಿಳಿಸಿದೆ ನಂದಾ ! ನಿನ್ನ ಶಿವಭಕ್ತಿಯ ಮಹಿಮೆಯನ್ನು ಅವರೂ ಒಪ್ಪಿದರು. ಆದ್ದರಿಂದ ನಿನ್ನೊಬ್ಬನನ್ನೆ ದೇವಾಲಯದ ಅಂಗಣದೊಳಕ್ಕೆ ಕರೆತಂದು, ಧ್ವಜಸ್ತಂಭದ ಬಳಿ ನಿಲ್ಲಿಸಬಹುದೆಂದು ಒಪ್ಪಿಗೆ ಕೊಟ್ಟರು. ಅಲ್ಲಿ ನಿಂತು-ಕೊಂಡು ನೀನು ದೇವರ ಮೂರ್ತಿಯ ದರ್ಶನವನ್ನು ಪಡೆದುಕೊಳ್ಳಬಹುದು!

**ನಂದ:—** (ಸಂಭ್ರಮ ಸ್ವರದಲ್ಲಿ) ನಂದನ ಬಾಳಿಂದು ಧನ್ಯವಾಗುವುದು! ನಂದನ ಹೊಲೆತನವಿಂದು ಹಿಂಗುವುದು ! ನಂದ ಧನ್ಯ, ನಂದ ಧನ್ಯ ! ಜಯ ಹರಹರ ಮಹಾದೇವ !

**ಗುಂಪೆಲ್ಲವು:—** ಜಯ ಹರಹರ ಮಹಾದೇವ! ಜಯ ಕೈಲಾಸನಾಥ! ಜಯ ಪತಿತಪಾವನ !

## ೫ ನೆಯ ದೃಶ್ಯ

(ಪಾರುಪತ್ಯಗಾರ ನಂದನನ್ನು ದೇವಾಲಯದ ಒಳಅಂಗಣದಲ್ಲಿ ಕರೆದು ತಂದಿದ್ದಾನೆ.

ದೇವದರ್ಶನಕ್ಕೆ ಬಂದವರು ಬಾರಿಸುವ ಗಂಟೆಗಳ ಸಪ್ಪುಳ; 'ಜಯ ಶಂಭೋ ಹರಹರ !' 'ಜಯ ಗಿರಿಜಾಪತೇ, ಭೂತನಾಥ!' ಎಂಬ ಘೋಷಗಳು ಕೇಳುತ್ತಿರಬೇಕು. ಆತನನ್ನು ಧ್ವಜಸ್ತಂಭದ ಬಳಿಯಲ್ಲಿ ಒಂದೆಡೆ ನಿಲ್ಲಿಸಿ ಹೇಳುತ್ತಾನೆ.)

**ಪಾರು:—** ಇಲ್ಲಿಯ ವರೆಗೆ ಬರಬಹುದು ನೀನು ನಂದಾ ! ಇಲ್ಲಿಯೇ ನಿಂತು ನೋಡಬೇಕು. ಎದುರುಗಡೆಗೆ ಕಾಣುವುದೇ ದೇವಾಲಯದ ಗರ್ಭಗಾರ! ಒಳಗೆ ಮಹರ್ಷಿ ಅಗಸ್ತ್ಯರಿಂದ ಸ್ಥಾಪಿತವಾದ ಶಿವಲಿಂಗವಿದೆ!

**ನಂದ:—** ಧನ್ಯನಾದೆ ಒಡೆಯಾ ! (ನೋಡಿ) ಆದರೆ ಇಲ್ಲಿಂದ ನನಗೆ ನನ್ನ ಸ್ವಾಮಿ ಹೇಗೆ ಕಾಣಬೇಕು ಬುದ್ಧಿ ! ಬಾಗಿಲಿಗೆದುರಾಗಿ ಬೆಟ್ಟದಂತಹ

ಬಸವ ಕುಳಿತುಬಿಟ್ಟಿದ್ದಾನೆ. ! ನನ್ನ ಒಡೆಯ ನನಗೆ ಕಾಣದಂತೆ ದಾರಿ ಕಟ್ಟಿದ್ದಾನೆ.

**ಪಾರು:—** ಅದಕ್ಕೇನು ಮಾಡುವುದಪ್ಪಾ ! ಇಲ್ಲಿಯೆ ನಿಂತುಕೊಂಡು ನೋಡಿ, ಕಂಡಷ್ಟರಿಂದ ಧನ್ಯನಾಗಿ ಮರಳಬೇಕು ?

**ನಂದ:—** (ಭಾವಾವಿಷ್ಟನಾಗಿ) ಶಿವಶಿವ ! ಕಂಡಷ್ಟರಿಂದಲೇ ಧನ್ಯನಾಗಬೇಕೇ ನಾನು ? ಆದರೆ ನನಗೆ ಕಾಣುವುದೇನು ? ಈ ಬಂಡೆಯ ಬಸವನ ಹಿಂಬದಿ ಮಾತ್ರ ! ನನ್ನ ಸ್ವಾಮಿಯ ಬಳಿಗೆ ಬಂದರೂ ನನಗೆ ಆತನ ದರ್ಶನ ವಿಲ್ಲ ! ಈ ನಂದ ಕಣ್ಣಿದ್ದು ಕುರುಡ !....ನನ್ನ ಒಡೆಯನನ್ನು ನೋಡಲು ಅಸಮರ್ಥವಾದ ಈ ತೊವಲ ಕಣ್ಣುಗಳನ್ನು ಇಟ್ಟುಕೊಂಡು ಮಾಡುವುದೇನು ? ಹೊಲೆಯ ಕುಲ ನನ್ನದು ! ಪಾಪಿ ಜನ್ಮ ನನ್ನದು ! ಎಂತಲೇ ನನ್ನ ಸ್ವಾಮಿಯ ಹತ್ತಿರ ಬಂದಿದ್ದರೂ ನನಗವನು ಕಾಣಲೊಲ್ಲ ! ದೇವಾ, ಹೌದು, ಪತಿತ ನಾನು ! ಆದರೆ ಪತಿತಪಾವನನು ಅಲ್ಲವೇ ನೀನು ? ಹೌದು ಹೊಲೆಯ ನಾನು ! ಹೊಲೆಯನನ್ನು ಕುಲಜನನ್ನಾಗಿ ಮಾಡುವ ಬಿರುದಿನವ ನಲ್ಲವೇ ನೀನು ? ಹಾಂ ! ಪಾಪಿ ನಾನು ! ಆದರೆ ಧೂತಪಾಪಕುಲನಲ್ಲವೇ ನೀನು ! ಭಕ್ತಾಭಿಮಾನಿ ! ನಾನು ನಿನ್ನ ಭಕ್ತನಲ್ಲವೆ ? ಹಾಗಾದರೆ ಬಾರೆಂದು ನನ್ನನ್ನು ಕರೆದೆಯೇಕೆ ಕರುಣಾಕರಾ ? ದೇವಾ !

**ಕರೆದೆ ಬಾಬಾ ಎಂದು, ಎಂತಲೇ ನಾ ಬಂದು**
**ಒರಲುತಿರುವೆನು ನಿನ್ನ ಬಾಗಿಲಲ್ಲಿ,**
**ಮರೆಯಲ್ಲಿ ಕುಳಿತು ನೀನೇನ ಭಾವಿಸುತಿರುವೆ ?**
**ಕರೆದುಕೊಳು ಭಕ್ತನನು ನಿನ್ನ ಬಳಿಯಲ್ಲಿ !**
**ಮೊಗದೋರು ಮೊಗದೋರು ಮೃಗಚರ್ಮಧಾರೀ !**
**ನಿನಗೆ ಹೆಸರಿಹುದಂತೆ ಭಕ್ತಕೈವಾರೀ !**
**ಶಂಭೋ....ಶಂಕರಾ....ಶಂಕರಾ....ಶಂಕರಾ !**

(ಎಂದು ಹಾಡುತ್ತಲೇ ಮೈಮರೆದು ಕೆಳಗೆ ಬೀಳುವನು. ಒಮ್ಮೆಲೇ ಗುಡುಗಿನ ಭೀಕರ ಗರ್ಜನೆ ಕೇಳಿಬರುವುದು.)

**ಒಂದು ಧ್ವನಿ:—** ಓ ! ಅಚಲನಾದ ಬಸವನ ಚಲನ ! ವಿಸ್ಮಯ ! ಆಶ್ಚರ್ಯ !!

**ಇನ್ನೊಂದು ಧ್ವನಿ:—** ಎಂದಿನಿಂದ ಕುಳಿತಿದ್ದ ಕಲ್ಲಿನ ಬಸವ, ಇಂದು ಪಕ್ಕಕ್ಕೆ ಸರಿದ !

**ಮತ್ತೊಂದು ಧ್ವನಿ:—** ಆನೆ ಕಟ್ಟಿ ಎಳೆಸಿದರೂ ಸರಿಯದ ಶಿಲಾ-ನಂದೀಶ್ವರ, ತಾನಾಗಿಯೇ ಚಲಿಸಿದ ! ಆಶ್ಚರ್ಯ ! ಆಶ್ಚರ್ಯ !

**ಮಗುದೊಂದು ಧ್ವನಿ:—** ಯಾವ ಭಕ್ತನ ಭಕ್ತಿಯ ಪವಾಡವೋ ಇದು !

**ಪಾರು:—** ಅಹಹಾ ! ನಂದನ ಶಿವಭಕ್ತಿ ಅಪ್ರಮೇಯವಾದದ್ದು ! ನಂದಾ, ನಂದಾ ಏಳು, ನೋಡು ! ನಿನ್ನ ಸ್ವಾಮಿ ನಿನಗೆ ಪ್ರತ್ಯಕ್ಷನಾಗಿ-ದ್ದಾನೆ; ಕಣ್ಣು ತಣಿವನಕ ನೋಡೇಳು ನಂದಾ !

**ನಂದ:—** (ಕಣ್ಣುತೆರೆಯುತ್ತ) ಏನು ? ನನ್ನ ಸ್ವಾಮಿ ನನಗೆ ಪ್ರತ್ಯಕ್ಷ ನಾದನೇ ? ಎಲ್ಲಿ? ಎಲ್ಲಿ ? ನನ್ನ ನಚ್ಚಿನ ಲೋಕನಾಥ ಎಲ್ಲಿ ? ಓ ನಂದಿ ! ಈ ನಂದನ ಮೇಲೆ ನಿನಗೆ ಕರುಣೆ ಬಂದಿತೆ ? ನೀನೇ ಬದಿಗೆ ಸರಿದು, ನನ್ನ ಒಡೆಯನ ದರ್ಶನ ಮಾಡಿಸಿದೆಯಾ ? ನಂದಾ, ನಿನ್ನ ಜೀವನ ಸಾರ್ಥಕವಾ-ಯಿತು. ಒಳಗೆ ಕೈಮಾಡಿ ಕರೆದ ಆ ಪತಿತಪಾವನ, ಹೊರಗೂ ನನ್ನನ್ನು ಬರಮಾಡಿಕೊಂಡ !

**ಪಾರು:—** ನಂದನ ಭಕ್ತಿಗೆ ಜಯವಾಯಿತು! ಜಯಭಕ್ತ ನಂದನಾರ್!

**ಅನೇಕ ಧ್ವನಿ:—** ಜಯಭಕ್ತ ನಂದನಾರ್! ಜಯಭಕ್ತ ನಂದನಾರ್! ಜಯಭಕ್ತ ನಂದನಾರ್ !

**ನಂದ:—** (ಭಜನೆ)

**ಶಿವಶಂಕರ ಶಿವಶಂಕರ ಶಿವಹರ ಗಿರಿಜಾರಮಣಾ !**
**ಭವಭಯಹರ ಗಂಗಾಧರ ಜಯಜಯ ಪತಿತೋದ್ಧರಣಾ !**

---

# ಪದ್ಯ ಭಾಗ

## ೧. ಹರಿಶ್ಚಂದ್ರಕಾವ್ಯ ★ ★ ★ ★

### ಕವಿ - ಕಾವ್ಯಪರಿಚಯ

ಕವಿರಾಘವಾಂಕನು ಕ್ರಿ. ಶಕದ ೧೩ನೆಯ ಶತಮಾನದ ಮಧ್ಯಕಾಲದಲ್ಲಿ ಬದುಕಿ ಬಾಳಿದವನೆಂದು ಕರ್ನಾಟಕ ಕವಿಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ. ಇವನು ಹುಟ್ಟಿಬೆಳೆದುದು ಹಂಪೆ. ಶ್ರೀಪಂಪಾವಿರೂಪಾಕ್ಷನು ಈತನ ಆರಾಧ್ಯದೈವತ. ಕನ್ನಡದಲ್ಲಿ ಶಿವಶರಣರ ರಗಳೆಗಳನ್ನು ಬರೆದು ಹೆಸರಾದ ಭಕ್ತಕವಿ ಹಂಪೆಯ ಹರೀಶ್ವರನಿಗೆ ಈ ಕವಿಯು ಸೋದರಳಿಯ–ಶಿಷ್ಯ.

ಕವಿರಾಘವಾಂಕನು 'ಹರಿಶ್ಚಂದ್ರಕಾವ್ಯ' ಎಂಬ ಆದರ್ಶ ಸತ್ಯವೀರನ ಕಥೆಯನ್ನು ಒಳಗೊಂಡ ಸರ್ವಜನಪ್ರಿಯ ಕೃತಿಯನ್ನು ರಚಿಸಿರುವನಲ್ಲದೆ, 'ಸಿದ್ಧರಾಮ ಪುರಾಣ' 'ಸೋಮನಾಥ ಚರಿತ್ರೆ' 'ವೀರೇಶ್ವರಚರಿತ್ರೆ' 'ಶರಭಚಾರಿತ್ರ' ಎಂಬ ಶೈವ ನಿಷ್ಠಾಪ್ರಚುರವಾದ ಬೇರೆ ನಾಲ್ಕು ಕೃತಿಗಳನ್ನೂ ನಿರ್ಮಿಸಿದ್ದಾನೆ. ಆದರೆ ಕೊನೆಯ-ವೆರಡು ಕೃತಿಗಳ ಮೂಲಮಾತೃಕೆಗಳು ಇದುವರೆಗೂ ದೊರೆತಿಲ್ಲ.

'ಹರಿಶ್ಚಂದ್ರಕಾವ್ಯ'ದಲ್ಲಿ ಅಯೋಧ್ಯೆಯ ದೊರೆ ಹರಿಶ್ಚಂದ್ರನ ಸತ್ಯವಂತಿಕೆಯನ್ನು ಪರೀಕ್ಷಿಸಲೆಂದು, ವಿಶ್ವಾಮಿತ್ರ ಋಷಿಯು ಅವನನ್ನು ಬಗೆಬಗೆಯ ಅಸಹನೀಯ ಕಷ್ಟದ ಸಂದರ್ಭಗಳಲ್ಲಿ ಕೆಡಹುವನು. ಎಲ್ಲವನ್ನೂ ತಾಳಿಕೊಂಡು ಹರಿಶ್ಚಂದ್ರರಾಜ, ತನ್ನ ಸತ್ಯನಿಷ್ಠೆಯನ್ನು ಹೇಗೆ ಸಂರಕ್ಷಿಸಿಕೊಂಡನೆಂಬ ಕಥೆಯು ಈ ಕೃತಿಯಲ್ಲಿ ಭಾವಪೂರ್ಣವಾಗಿ ರೂಪಿತವಾಗಿದೆ. ಕವಿಯು ಈ ಕಾವ್ಯವನ್ನು ವಾರ್ಧಕಷಟ್ಪದಿಯಲ್ಲಿ ರಚಿಸಿದ್ದಾನೆ. ಕನ್ನಡದಲ್ಲಿ ವಾರ್ಧಕಷಟ್ಪದಿಯಲ್ಲಿ ಕೃತಿರಚನೆ ಮಾಡಿದ ಮೊತ್ತಮೊದಲಿಗನು ಈ ಕವಿಯೇ.

ದಾನದ ನೆಪದಿಂದ ಹರಿಶ್ಚಂದ್ರರಾಜನು ತನ್ನ ಸಾಮ್ರಾಜ್ಯಸೌಭಾಗ್ಯಗಳನ್ನೆಲ್ಲ ವಿಶ್ವಾಮಿತ್ರಋಷಿಗೆ ಒಪ್ಪಿಸುತ್ತಾನೆ. ದಾನದ ಜೊತೆಗೆ ಕೊಡಬೇಕಾದ ದಕ್ಷಿಣಾದ್ರವ್ಯವು ಇನ್ನೂ ಸಂದಾಯವಾಗಿರಲಿಲ್ಲ. ಕೊಟ್ಟಮಾತಿಗೆ ತಪ್ಪಬಾರದೆಂದು, ಹೇಗಾದರೂ ಮಾಡಿ ಋಷಿಯ ಋಣದಿಂದ ಮುಕ್ತನಾಗಬೇಕೆಂದು, ಹರಿಶ್ಚಂದ್ರರಾಜ ಅಯೋಧ್ಯೆಯಿಂದ ಹೊರಟು ಕಾಶೀಕ್ಷೇತ್ರಕ್ಕೆ ಹೆಂಡತಿ ಚಂದ್ರಮತಿ, ಮಗ ರೋಹಿತಾಶ್ವ, ಮಂತ್ರಿ — ಇವರೊಂದಿಗೆ ಪ್ರಯಾಣಮಾಡುತ್ತಾನೆ. ಈ ಪ್ರಯಾಣಸಂದರ್ಭದಲ್ಲಿಯೂ ಅವರು ಎಂತಹ ನಿಷ್ಠುರಸಂಕಟಕ್ಕೆ ಗುರಿಯಾಗಿ ಪಾರಾದರೆಂಬ ಸಂಗತಿಯು, ಇಲ್ಲಿ ಆಯ್ದುಕೊಂಡಿರುವ ಕಾವ್ಯಭಾಗದಲ್ಲಿ ವರ್ಣಿತವಾಗಿದೆ.

* * * *

# ಹರಿಶ್ಚಂದ್ರನ ಕಾಶೀಪ್ರಯಾಣ

ಎಡೆವಿಡದೆ ದಾರಿಯರುಪಲು ಮಂತ್ರಿ ಮುಂದೆ ಸುತ
ನೆಡದ ದೆಸೆಯಲಿ ನಿಜಾಂಗನೆ ಹಿಂದೆ ಬರೆ ಭೂಮಿ
ಯೊಡೆಯನೊಡವೆಗಳೊಡೆತನಂಗಳನೊಡಂಬಟ್ಟು
ಮುನಿಗಿತ್ತ ಚಿಂತೆ ತನ್ನ ।
ಬಿಡೆ ದಕ್ಷಿಣವ ಬಿಟ್ಟು ದಕ್ಷಿಣಾರ್ಥಂಗಳಂ
ಕೊಡುವೆನೆಂಬುತ್ತರವನುತ್ತರಿಸಲುತ್ತರಂ
ಬಿಡಿದು ನಡೆದಂ ನೆರವನಾರುವಂ ಹಾರದಾ-
ಧೀರ ಕಾಂತಾರದೊಳಗೆ ॥ ೧ ॥

ಸುತನನಡಿಗಡಿಗೆತ್ತಿಕೊಂಬ ನಡೆಗೆಡುವ ನಿಜ
ಸತಿಯನಡಿಗಡಿಗೆ ಬೋಳೈಸ ಬಳಲುವ ಚಮೂ
ಪತಿಯನಡಿಗಡಿಗೆ ಬಿಡದುಪಚರಿಪ ಚಿತ್ತದಾ
ವೇಶದಗ್ರದ ಭರದಲಿ ।
ಅತಿ ಬಿಸಿಲು ಗಾಳಿ ಕಲು ಮುಳು ಕ್ಷುತ್ಪಿಪಾಸೆ ಜಾ
ಡ್ಯತೆಗಳೆಂಬಿಂತಿವರ ಕಾಟದಿಂ ಮೊಳೆವ ಧಾ
ವತಿಯನರಿಯದೆ ನಡೆದನಕಟಕಟ ಭೂಮಿಪಂ
ಕಾಲಕ್ಕೆ ಕೈಮುಗಿಯುತ ॥ ೨ ॥

ಮುಂದೈಪ ಬಿಸಿಲ ಬಿಸಿಯಿಂ ನೆತ್ತಿ ನೆಲನ ಬಿಸಿ
ಯಿಂದ ಕಾಲ್ ಕಡೆಗಣಿಸಿ ಕವಿವ ಕಾದೆಲರ ಬಿಸಿ
ಯಿಂದ ದೇಹಂ ಕ್ಷುಧಾನಲನ ಬಿಸಿಯಿಂದೊಳಗು
ತೃಷೆಯ ಬಿಸಿಯಿಂದ ಬಾಯಿ ।
ಬೆಂದು ಬಿರಿದರಳುತ್ತ ಸಾಯುತ್ತ ನೋಯುತ್ತ
ನಿಂದು ನಡೆದಳುಕುತ್ತ ಬಳುಕುತ್ತ ಬರಬರಲು
ಮುಂದೆ ಬಳಿಕೇವೊಗಳ್ವೆನಕಟ ನಿಷ್ಕರುಣಮುನಿ
ನೆನೆದ ಕುಟಿಲದ ಕುಂದನು ॥ ೩ ॥

ಕುತ್ತುರಾಗಿರ್ದ ಹೆಮ್ಮೆಳೆಗಳಂ ಸುಡುತ ಬೆಳೆ
ವೆತ್ತ ಬೆಟ್ಟವ ಸೀಳ್ದು ಸೆಕ್ಕೆಗಳೆಯುತ್ತ ಹುಲು
ವೆತ್ತ ದರಿಗಳ ಕರಿಕುವರಿಸುತ್ತ ಬೆಳೆದ ಮರ
ದಿಡುಕುರೊಳು ನಿಂದುರುಹುತ ।
ಹೊತ್ತುತ್ತ ಹೊಗೆಯುತ್ತ ಹಬ್ಬುತ್ತ ಹರಿದು ನೆಗೆ
ಯುತ್ತ ಗಗನವನು ತುಡುಕುತ್ತ ಮತ್ತಂತಡಿಸಿ
ಸುತ್ತ ಮುತ್ತಿತ್ತು ದಾವಾನಲನಸತ್ಯಕಾಂ-
ತಾರದಾವಾನಲನನು ॥ ೪ ॥

ಮುಟ್ಟಿ ಕಾಶಿಯನು ಹೊಕ್ಕವನಲ್ಲ ಮುನಿರಿಣವ
ಕೊಟ್ಟಾತನಲ್ಲ ದಾನದ ಭೂಮಿಯಿಂದ ಪೊರ
ಮಟ್ಟಾತನಲ್ಲಾಯು ತುಂಬಿ ಮಡಿದವನಲ್ಲ
ಹೋಹಡಾನೊಬ್ಬನಸುವ ।
ಬಿಟ್ಟಾತನಲ್ಲ ನಿಜಸತಿಸುತರ್ ಮಂತ್ರಿ ಸಹ
ನಟ್ಟಡವಿಯೊಳಗೆ ದಳ್ಳುರಿಹೊಯ್ದು ದುರ್ಮರಣ
ವಟ್ಟು ಹೋಹಂತಾದುದೇ ಎಂದು ನೃಪತಿ ಮರು
ಗುತ್ತ ಮತ್ತಿಂತೆಂದನು ॥ ೫ ॥

ಕಡಗಿ ಕರ್ಬೊಗೆ ಸುತ್ತಿ ದಳ್ಳುರಿಗಳಲೆದು ಕೆಂ
ಗಿಡಿಗೆದರಿ ಕೆಂಡಂಗಳಡಸಿ ಸುಡೆ ಮಿಡುಮಿಡನೆ
ಮಿಡುಕಿ ಬಾಯ್ಬಿಟ್ಟೊರಲಿ ಕೆಡೆದೊಡಲು ಮಡಿದು ಕೈ
ಕಾಲ್ಬೆಂದು ಸುಕ್ಕಿ ಸುಗಿದು ।
ಮಡದಿ ಸುತರಳಿವುದನು ಕಣ್ಣಾರೆ ಕಂಡು ನಾಂ
ಕಡೆಯಲಲಿವುದರಿಂದ ಮುನ್ನವೀ ಬೇಗೆಯೊಳ
ಗಡಗುವೆಂ ಹಿಡಿಯಬೇಡುಮ್ಮಳಿಸಬೇಡೆಂದು
ನೃಪ ಬೀಳಲನುವಾದನು ॥ ೬ ॥

ಮುಳಿದು ಮೊಗೆದೆಲ್ಲರಂ ಕೊಲ್ಲದಿಂದೆನ್ನನೊ
ಬ್ಬಳನೆ ಕೊಂದಪುದೆ ಭೂಭುಜ ನಿಮ್ಮ ಕೂಡೆ ಸರಿ
ಯೊಳು ಜೀವವಂ ಬಿಡುವುದುಚಿತವಲ್ಲಿಂ ಬಳಿಕ
ಬಿಡುವುದತ್ಯಧಮತನವು ।
ಎಳಸಿ ಮುತ್ತೈದೆತನದಲಿ ಮುಂದೆ ಹೋದಪೆಂ
ಕಳುಹಿಕೊಡಬೇಕೆಂದು ಮೆಯ್ಯಿಕ್ಕಿ ಬೇಡಿಕೊಂ
ಡಳು ಗಂಡನಂ ಚಂದ್ರುಮತಿ ಪತಿವ್ರತೆಯರಾ-
ನಂದನಿಧಿ ಲಲ್ಲೆಗರೆದು ॥ ೭ ॥

ದೆಸೆಗಳಿಗೆ ನಮಿಸಿ ದೈವಕ್ಕೆರಗಿ ರವಿಗೆ ವಂ
ದಿಸಿ ಕೋಟಿ ಭವಭವದೊಳೆನಗೀ ಹರಿಶ್ಚಂದ್ರ
ವಸುಧೇಶನೇ ಗಂಡನಾಗಲಿ ದಿಟಂ ಲೋಹಿ
ತಾಶ್ವನೇ ಮಗನಾಗಲಿ ।
ವಸುಸತ್ಯಕೀರ್ತಿಯೇ ಮಂತ್ರಿಯಾಗಲಿ ತರುಣ
ಶಶಿಮೌಳಿಯೇ ದೈವವಾಗಲೆಮ್ಮಿಳೆಯ ಪಾ
ಲಿಸುವ ವಿಶ್ವಾಮಿತ್ರ ನಿತ್ಯನಾಗಲಿಯೆನುತ
ಬೇಡಿಕೊಂಡಿಂತೆಂದಳು ॥ ೮ ॥

ಪೊಡವೀಶ ಕೇಳುಭಯಕುಲಶುದ್ಧಿಯಲ್ಲದಿ
ರ್ದಡೆ ನಿನ್ನನಲ್ಲದನ್ಯರನು ಲೆಕ್ಕಿಸಿದೆನಾ
ದಡೆ ಹಿಂದೆ ನಿನಗೊಂದನಿಕ್ಕಿ ನಾನೊಂದನುಂ
ಡಡೆ ಮೂರು ಕರಣವರಿಯೆ ।
ಮೃಡನಲ್ಲದನ್ಯದೈವಕ್ಕೆ ನಮಿಸಿದಡೆನ್ನ
ಹೊಡೆದು ಮುಕ್ಕುವುದು ದಾವಾಗ್ನಿ ಮೇಣಲ್ಲದಿ
ರ್ದಡೆ ಬಟ್ಟೆಗೊಟ್ಟಪುದು ಕೇಳೆಂದು ಬೊಬ್ಬೆಗೊಡು
ವಾ ಪೊತ್ತನೇವೊಗಳ್ವೆನು ॥ ೯ ॥

ತರುಣಿಯ ಮನಂ ಬೆದರಬೇಕೆಂದು ನೆಗೆದು ದ
ಳ್ಳುರಿ ಗಗನಮಂ ತೀವಿ ಸುತ್ತಿ ಮುತ್ತಿರೆ ಕಂಡು
ಹರಿದು ಹೊಕ್ಕಳು ಹೊಕ್ಕಳೆಲೆಲೆ ಶಿವಶಿವ ಮಹಾ
ದೇವ ಬಗೆಯದೆ ಹೊಕ್ಕಡೆ ।
ತರುಣಸೂರ್ಯಂ ಕತ್ತಲೆಯನೆ ಹೊಕ್ಕಂತಾಯ್ತು
ನೆರೆದ ಕೌಶಿಕನ ಕೃತಕಾಗ್ನಿ ಹರಿದೋಡಿ ಭಾ
ಪುರೆ ಬಟ್ಟೆಗೊಟ್ಟುದೆಂಬಾಗಳುತ್ತಮರ ಮುಂ-
ದಾವ ಠಕ್ಕಿರಲಾಪುದು ॥ ೧೦ ॥

ಸುರರ ಹೂಮಳೆಯ ತಂಪಿಂ ನೆಲನ ಬಿಸಿಯಾರಿ
ತುರಿಯ ನೆವದಿಂ ಸತಿಯ ಶುಚಿತನವನರಿದು ಭೂ
ವರನಪ್ಪಿದಂ ಮಂತ್ರಿಯೆರಗಿದಂ ಸುತನು ನಲಿ
ದಾಡಿದಂ ಸಂತಸದಲಿ ।
ಹರಕೃಪೆಯೊಳಗ್ನಿಭಯವೆಂತಕ್ಕಿದೊಮ್ಮಿಂಗೆ
ಪರಿಹರಿಸಿತುಗ್ರಮುನಿಗಿತ್ತವಧಿ ಸನಿಹವಾ
ಯ್ತಿರಬಾರದುರವಣಿಸಿ ನಡೆನಡೆಯೆನುತ್ತ ಹರಿ-
ತಂದು ವಿಂಧ್ಯವ ಕಳಿದರು ॥ ೧೧ ॥

ಹಲವು ನಗರಂಗಳಂ ಹಲವರಣ್ಯಂಗಳಂ
ಹಲವು ಗಿರಿಗಳ ಕಳಿದು ನಡೆತರಲು ಮುಂದೆನುತ
ಕಲಿಮಲಕುಲಾಪಕರ್ಷಣೆಯಾನು ವಿಪುಳಪಾ-
ತಕಕೋಟಿಕೋಟಿಯೆಂಬ ।
ಜಲಜವನಚಂದ್ರಕಳೆಯಾನು ಭವಭಯಕುಧರ
ಕುಲಿಶಾಭಿಧಾನೆಯಾನೆಂದು ಧರೆಗರುಪಲೆಂ
ದುಲಿವಂತೆ ಘುಳುಘುಳುಧ್ವಾನದಿಂದೆಸೆವ ಗಂ
ಗಾನದಿ ವಿರಾಜಿಸಿದಳು ॥ ೧೨ ॥

ಬಿಡೆ ಕೇಳ್ದಡಘಹರಂ ನೆನೆಯೆ ಪುಣ್ಯೌಘ ನುಡಿ
ದಡೆ ಸರ್ವಸಿದ್ಧಿ ಕಂಡಡೆ ಜನ್ಮನಾಶ ಪೊಗ
ಳ್ದಡೆ ಸುರೇಂದ್ರತ್ವ ಸೋಂಕಿದಡೆ ಕಮಲಜಪದವಿ
ಮರೆದೊಮ್ಮೆ ಕುಡಿತೆಗೊಂಡು ।
ಕುಡಿದನಾದಡೆ ಮುಕ್ತಿಯವಗಾಹವಿರ್ದನಾ
ದಡೆ ಗಣೇಶತ್ವ ಸಾರ್ದಡೆ ಮಹಾರುದ್ರತ್ವ
ವಡೆವರೀ ಗಂಗೆಯಿಂದಾರಾದಡೆಂಬ ಮಹಿ-
ಮೆಗೆ ಸಾಕ್ಷಿ ವೇದಮತವು ॥ ೧೩ ॥

ಭವಭಯಾಂಬುಧಿಯನುತ್ತರಿಸುವಂತುತ್ತರಿಸಿ
ಯವಗಾಹವಿರ್ದುಂ ಕೃತಾರ್ಥತೆಯನೆಯ್ದುತಿ
ಪ್ಪವರನೀಕ್ಷಿಸಿ ಗಂಗೆ ಹೆಚ್ಚಿದಳು ನರಕಿಗಳು
ತನ್ನೊಳಗೆ ತೊಳೆದ ದೋಷ ।
ತವಿಲಾದುದಿಂದು ಪತಿಹಿತವೆಯಹ ಸುದತಿಯನ್ನ
ತವನರಿಯದವನೀಶನುಭಯಕುಲಶುದ್ಧನಹ
ಕುವರನೀ ಸ್ವಾಮಿಹಿತವನಹ ಮಂತ್ರಿಯ ಸೋಂಕು
ತನಗೆ ಕೈಸಾರ್ದುದೆಂದು ॥ ೧೪ ॥

ನಡೆಯೊಡೆ ಮದ್ದು ವಿಷವೊಡಲಿಂಗೆ ಹಿತವೆಂಬ
ನುಡಿಯಂತೆ ಸುಖವಿಲ್ಲ ಪುಣ್ಯವುಂಟುಳಿದ ಹಲ
ವೆಡೆಯ ಸುಕ್ಷೇತ್ರಂಗಳೊಳಗವರ ಪರಿಯಲ್ಲ
ಸುಖವುಂಟು ಪುಣ್ಯವುಂಟು ।
ಕುಡಿವ ಪಾದೋದಕಂ ಪನ್ನೀರ ಪಾನವಾ
ದಡೆ ಧರಿಸುವ ಪ್ರಸಾದಂ ಸುಧಾಪಿಂಡವಾ
ದಡೆ ಬಿಡುವರಾರೆನಿಪ್ಪಂತೆ ಜನದಿಹಪರಕೆ
ಸೊಗಸು ಕಾಶೀಕ್ಷೇತ್ರವು ॥ ೧೫ ॥

ಮುಗಿಲ ಬಸುರಂ ಬಗಿದು ನೆಗೆದೊಗೆದು ಮಿಾರಿ ಮೆರೆ
ವಗಣಿತವೃಷಧ್ವಜಂಗಳ ಸೂರ್ಯಕೋಟಿಯಂ
ತೆಗೆದುವೆಂಬಂತೆ ಮಾರ್ಪೊಳೆವ ಹೊಂಗಳಸಂಗ
ಳೆಸೆವ ಶಿವನಿಳಯಂಗಳ ।
ಸೊಗಸಿಗೆಡೆಯಾಡಿಯಾಡುತ ಪಾಡುತೆಯ್ತಪ್ಪ
ಪೊಗಳಿ ಪೊಡಮಡುವ ಬಲಗೊಂಬ ನೋಡುವ ನಲಿವ
ನಗುವ ನಾನಾಜನವನೊತ್ತರಿಸಿ ನಡೆತಂದು
ವಿಶ್ವಪತಿಯಂ ಕಂಡನು ॥ ೧೬ ॥

ನೋಡಿ ಪರಮಾನಂದ ಮೂಡಿ ಸುಖರಸದೊಳೋ
ಲಾಡಿ ಕೀರ್ತಿಸಿ ಹರಸಿ ಹಾಡಿ ಸದ್ಭಕ್ತಿಯಂ
ಬೇಡಿ ಮನದೊಳಗೆ ಮಾತಾಡಿ ನೆರೆ ಬಿನ್ನಹಂ
ಮಾಡಿ ಪ್ರಸಾದಫಲವ ।
ಸೂಡಿ ಪರಿಣಾಮವಂ ಮಾಡಿ ದುಃಸ್ಥಿತಿಯ ನೀ
ಗಾಡಿ ಭವಜಲವನೀಸಾಡಿ ಬಲ್ಪಿಂ ಮನಂ
ಮೂಡಿ ಬೀಳ್ಕೊಂಡು ಸಂತಸದಿ ಮರಳಿದನುಳಿದ
ಲಿಂಗಂಗಳಂ ನೋಡುತ ॥ ೧೭ ॥

Funding: Tattva Heritage Foundation,Kolkata. Digitization: eGangotri.



ಗಡಿಗೆಟ್ಟ ಲಿಂಗಂಗಳೊಪ್ಪಕ್ಕೆ ಭೋಗಂಗ
ಳಡಕಕ್ಕೆ ಮಂಗಳದ ಮಸಕಕ್ಕೆ ರಚನೆಗಳ
ಸಡಗರಕೆ ಬೆರಗಾಗುತೆಲ್ಲಾ ನಿರೋಧಮಂ
ಮರೆದು ನೋಡುತ್ತರಸನು ।
ನಡೆಯುತಿರಲಿದಿರೆದ್ದು ಮಾರಿಯಂದದಿ ಬಂದು
ಕೊಡು ಹೊನ್ನನಿನ್ನು ತಳುವಿದಡೆನ್ನ ಪತಿಯೆನಗೆ
ಕಡುಮುಳಿವನೆಂದು ಜರೆಯುತ್ತ ನಕ್ಷತ್ರಕಂ
ತುಡುಕಿ ಸೆರಗಂ ಹಿಡಿದನು ॥ ೧೮ ॥

ಕೊಟ್ಟವಧಿಯಂ ನೆನೆದು ನೋಡಿ ಹವ್ವನೆ ಹಾರಿ
ಮುಟ್ಟಬಂದುದು ದಿನಂ ಕೈಕೊಂಡ ತೆರದವಂ
ಕಟ್ಟುಗ್ರನಭ್ಯಾಸದವರಿಲ್ಲ ಜಾಚಲಡ
ಪಿಲ್ಲ ನಾಂ ಕುಲಧರ್ಮವ ।
ಬಿಟ್ಟು ತಿರಿವವನಲ್ಲವೋಲೈಸಿ ನೆರೆ ಲಜ್ಜೆ
ಗೆಟ್ಟು ಬೇಡುವಡಿಲ್ಲಿ ದೊರೆಯಿಲ್ಲ ಕೃಷಿಯಿಂದ
ಹುಟ್ಟಿಸುವೆನೆಂಬಡೆಡೆಯಿಲ್ಲವಿನ್ನೇಗೆಯ್ವೆ-
ನೆಂದು ಮರುಗಿದನರಸನು ॥ ೧೯ ॥

ಏಗೆಯ್ವೆ ಚಿಂತಾಗ್ನಿಯುರಿಯ ಹೊಯ್ಲಿಂ ಕರಗಿ
ಹೋಗದಿರನೆಚ್ಚರಿಸಬೇಕೆಂದು ಸತಿಯವಧಿ
ಮೇಗೆರಡು ಜಾವವಿದರೊಳಗೆ ತಿದ್ದುವ ಬುದ್ಧಿ
ಯಂ ಕಾಣಬೇಕಲ್ಲದೆ ।
ಮೂಗುವಟ್ಟಿರ್ದಡೇನಹುದೆಂದಡಿರದೆ ಬಳಿ
ಕೇಗೆಯ್ವೆ ಹೇಳೆನಲು ಸಾಲದಲಿ ಪೋದನಿತು
ಪೋಗಲೆಮ್ಮಿಬ್ಬರಂ ಮಾರಿ ಬಳಿಕುಳಿದುದಂ
ಕಾಣು ನಡೆನಡೆ ಎಂದಳು ॥ ೨೦ ॥

---

# ೨. ಜೈಮಿನಿ ಭಾರತ ★ ★ ★ ★

## ಕವಿ - ಕಾವ್ಯ ಪರಿಚಯ

ಕವಿ ಲಕ್ಷ್ಮೀಶನು ಹುಟ್ಟಿಬಳೆದ ಊರು ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ದೇವನೂರು. ಆ ಊರಲ್ಲಿ ಕವಿಯ ಆರಾಧ್ಯದೈವತವಾದ ಲಕ್ಷ್ಮೀರಮಣಸ್ವಾಮಿಯ ಪ್ರಾಚೀನ ದೇವಾಲಯವಿದೆ. ಆ ದೇವಾಲಯದಲ್ಲಿ ಕವಿ ಲಕ್ಷ್ಮೀಶನದೆಂದು ಹೇಳುವ ಒಂದು ಶಿಲಾವಿಗ್ರಹವೂ ಇದೆ. ಅಲ್ಲದೆ, ಈ ಕವಿಯು ರಚಿಸಿದುವೆಂದು ಹೇಳುವ ಅನೇಕ ಹಾಡು, ಕೀರ್ತನೆಗಳೂ ಅಲ್ಲಿ ಕರ್ಣಪರಂಪರೆಯಿಂದ ಉಳಿದುಬಂದಿವೆ.

ಸಾಮಾನ್ಯವಾಗಿ ಕನ್ನಡದ ಹರಿಭಕ್ತ ಕವಿಗಳ ಕಾಲ-ಮತಗಳ ವಿಚಾರ ವಾದಾಸ್ಪದ ವಾಗಿಯೆ ಇದೆ. ಲಕ್ಷ್ಮೀಶನ ಮತ-ಕಾಲಗಳ ಬಗೆಗೂ ಸಂಶೋಧಕರಲ್ಲಿ ವಾದ-ಚರ್ಚೆಗಳು ನಡೆದೇ ಇವೆ. ಆದರೆ ಇವನು ಭಾಗವತಪಂಥಕ್ಕೆ ಸೇರಿದ ಬ್ರಾಹ್ಮಣ ನೆಂದೂ, ಕ್ರಿ. ಶ. ೧೬ನೆಯ ಶತಮಾನದ ಪ್ರಾರಂಭಭಾಗದಲ್ಲಿ ಜೀವಿಸಿದವನೆಂದೂ ಇತ್ತೀಚಿನ ಕೆಲವು ಜನ ಸಂಶೋಧಕರು ಅಭಿಪ್ರಾಯಪಡುತ್ತಿದ್ದಾರೆ. ತಾನು ಭಾರದ್ವಾಜಗೋತ್ರದ 'ಅಣ್ಣಮಾಂಕ' ಎಂಬವನ ಸುತನೆಂದು ಕವಿಯು ತಾನೇ ತನ್ನ ಕಾವ್ಯದ ಕೊನೆಯಲ್ಲಿ ಹೇಳಿಕೊಂಡಿದ್ದಾನೆ.

ಲಕ್ಷ್ಮೀಶಕವಿಯ ಮಹಾಕೃತಿಯೆಂದು ನಮಗೆ ದೊರೆತಿರುವುದು 'ಜೈಮಿನಿ ಭಾರತ' ಒಂದೇ ಒಂದು. ಇದಕ್ಕೆ ಕಥಾವಸ್ತುವನ್ನು ಒದಗಿಸಿಕೊಟ್ಟದು ಸಂಸ್ಕೃತ ಜೈಮಿನಿಭಾರತ. ಹಸ್ತಿನಾವತಿಯ ದೊರೆ ಧರ್ಮರಾಜನು 'ಅಶ್ವಮೇಧ' ಎಂಬ ಯಜ್ಞನಡೆಯಿಸಿದ ವೃತ್ತಾಂತವು ಇದರಲ್ಲಿ ಅಡಕವಾಗಿದೆ. ಈ ಕಾವ್ಯವು 'ವಾರ್ಧಕ ಷಟ್ಪದಿ' ಎಂಬ ಮಾತ್ರಾಗಣವೃತ್ತದಲ್ಲಿ ರಚಿತವಾಗಿದ್ದು, ಶುದ್ಧಭಾಷೆ-ಸುಂದರಶೈಲಿ ಗಳ ಮೂಲಕ ಇದು ತುಂಬ ಜನಪ್ರಿಯವಾಗಿದೆ. ಶ್ರೀಕೃಷ್ಣಭಕ್ತಿಯ ಮಹಾತ್ಮ್ಯ ಬೋಧೆಯೇ ಕವಿಯ ಉದ್ದೇಶವಾಗಿದೆ.

ಧರ್ಮರಾಜನ ಯಜ್ಞದ ಕುದುರೆ ದೇಶ-ದೇಶಗಳಲ್ಲಿ ಸಂಚರಿಸುತ್ತ ಹೊರಟಾಗ ವಿಂಧ್ಯಪರ್ವತದ ಬಳಿಯ ಅರಣ್ಯದಲ್ಲಿ ಒಂದು ಬಂಡೆಯಲ್ಲಿ ಸಿಕ್ಕಿಕೊಂಡು ನಿಲ್ಲುತ್ತದೆ.

ಅದರ ಬೆಂಗಾವಲಿಗೆಂದು ಬಂದಿದ್ದ ಅರ್ಜುನನು ಹೀಗೇಕಾಯಿತೆಂದು ಚಿಂತೆಗೊಳ ಗಾಗುವನು. ಬಳಿಕ ಅವನು ಸಮೀಪದ ಆಶ್ರಮದಲ್ಲಿ ಇದ್ದ ಸೌಭರಿಮುನಿಗಳನ್ನು ಕಂಡು, ತಮ್ಮ ಯಜ್ಞದ ಕುದುರೆ ಬಂಡೆಯಲ್ಲಿ ಸಿಕ್ಕಿಕೊಂಡುದನ್ನು ಬಿನ್ನವಿಸಿಕೊಂಡು, ಅದರ ಬಿಡುಗಡೆಯ ಉಪಾಯವನ್ನು ಅವರಿಂದ ಅರಿತುಕೊಳ್ಳುವನು. ಈ ವಿಷಯ ವನ್ನು ಒಳಗೊಂಡ ಕಾವ್ಯಭಾಗವನ್ನು ಇಲ್ಲಿಭ್ಯಾಸಕ್ಕೆಂದು ಆಯ್ದುಕೊಳ್ಳಲಾಗಿದೆ.

* * * *

## ಸೌಭರಿಮುನಿಯ ಸಂದರ್ಶನ

ವೇದಶಾಸ್ತ್ರಾಗಮ ಸ್ಮೃತಿ ಪುರಾಣಾವಳಿಯ ।
ನೋದಿಸುವ ಕುಶ ಸಮಿತ್ಪುಷ್ಪ ಫಲ ಮೂಲ ಪ ।
ರ್ಣಾದಿಗಳನೊದವಿಸುವ ಜಪ ತಪಸ್ನಾನಾಗ್ನಿ
ಹೋತ್ರವಿಧಿ ವೇಳೆಗಳನು ॥
ಸಾಧಿಸುವ ರವಿನಮಸ್ಕಾರ ಹರಿಹರ ಸಮಾ ।
ರಾಧನೆಗಳಂ ಮಾಡುವತಿಥಿಗಳನಕ್ಕರಿಯಿಂ ।
ದಾದರಿಪ ಯೋಗಮಾರ್ಗದೊಳೆಸೆವಮುನಿಗಳಾ
ಶ್ರಮದೆಡೆಯೊಳಿರುತಿರ್ದರು ॥ ೧ ॥

ಸುಡದಿರ್ದ ಪಾವಕನೊ ಬಿಸಿ ಮಾಣ್ದ ರವಿಯೊ ತಂ ।
ಪಿಡಿದಿರದ ಚಂದ್ರಮನೊ ವಿಷಕಂಠನಾಗದಿಹ ।
ಮೃಡನೊ ರಜಮಂ ಪೊರ್ದದಂಬುಜಾಸನನೊಫಣಿ
ತಲ್ಪನಲ್ಲದ ವಿಷ್ಣುವೊ ॥
ಕಡುತೇಜದೊಬ್ಬುಳಿಯೊ ಶಾಂತಿಯ ನಿಜಾಕಾರ ।
ದೊಡಲೊ ಪೇಳೆಂಬ ಸೌಭರಿ ಮುನಿಪನಾಶ್ರಮದ ।
ನಡುವೆ ಕುಳ್ಳಿರ್ದು ಸುಖಯೋಗದೊಳಿರಲ್ಕೆನಡೆ
ತಂದರ್ಜುನಂ ಕಂಡನು ॥ ೨ ॥

ಬಂದು ಸಾಷ್ಟಾಂಗದಿಂದೆರಗಿ ಸೌಭರಿ ಮುನಿಯ ।
ಮುಂದೆ ಕೈಮುಗಿದು ನಿಲಲಾ ಪಾರ್ಥನಂ ಪ್ರೀತಿ ।
ಯಿಂದೆ ಸತ್ಕರಿಸಿ ಕುಶಲಂಗಳಂ ಕೇಳ್ದಿಲ್ಲಿ
ಗೇಕೆಬರವಾಯಿತೆನಲು ॥
ಅಂದು ಕುಲಗೋತ್ರಮಂ ಕೊಂದ ಪಾಪಂ ಪೋಗ ।
ಲೆಂದಶ್ವಮೇಧಮಂ ತೊಡಗಿ ಯೆನ್ನಂ ಧರ್ಮ ।
ನಂದನಂ ಕಳುಹಿದಂ ಹಯ ರಕ್ಷೆಗದರೊಡನೆ
ಬರೆ ಸಿಲ್ಕಿತದು ಶಿಲೆಯೊಳು ॥ ೩ ॥

ಎಲೆ ಮುನೀಶ್ವರ ತವಾನುಗ್ರಹದೊಳಲ್ಲದೀ ।
ಶಿಲೆಯೊಳೊಂದಿದ ಹಯಂ ಬಿಡುವಂದಮಂ ಕಾಣೆ ।
ನುಳುಹಬೇಕೆಂದೆರಗಲರ್ಜುನನ ಮೊಗ ನೋಡಿ
ನಗುತೆ ಸೌಭರಿ ನುಡಿದನು ॥
ತಿಳುಹಿದಂ ಪಿಂತೆ ಭಾರತ ಯುದ್ಧಮಧ್ಯದೊಳ್ ।
ನಳಿನನಾಭಂ ನಿನಗೆ ಮತ್ತೆಯುಮಹಂಕಾರ ।
ಮಳಿದುದಿಲ್ಲಕಟ ಜಗದೊಳ್ ಕೊಲ್ವರಾರ್ಕಾವ
ರಾರ್ ಬಲ್ಲೊಡುಸಿರೆಂದನು ॥ ೪ ॥

ಶ್ರೀಕೃಷ್ಣನಿರೆ ಮುಂದೆ ವಂಶಮಂ ಕೊಂದೆನೆಂ ।
ಬೀ ಕೃತ್ಯದಿಂ ಪಾತಕಂ ಬಹುದೆ ನಿಮ್ಮೊಳ್ ಸ ।
ದಾ ಕೃಪಾನಿಧಿಯ ಸಾನ್ನಿಧ್ಯಮಿರುತಿರಲಾಗಿ
ವಾಜಿಮೇಧಂ ಬೇಹುದೆ ॥
ಆ ಕೃತಾಂತಕನರಿದುದಿಲ್ಲಲಾ ಲೋಕದೊಳ್ ।
ಪ್ರಾಕೃತರ ತೆರದಿಂದೆ ಹರಿ ಮನೆಯೊಳಿರೆ ಗರ್ದ ।
ಭಾಕೃತಿಯ ಹರಿಯೊಡನೆ ಬಂದೆ ಸುರ ಭೂಜಮಿರೆ
ಶಾಲ್ಮಲಿಯನರಸುವಂತೆ ॥ ೫ ॥

ಕೊಟ್ಟಿಗೆಯ ಕಾಮಧೇನುವನೊಲ್ಲದಳ್ತಿಯಿಂ ।
ಕಟ್ಟರಣ್ಯದ ಪುಲಿಯನರಸಿ ಕರೆಯಲ್ಕೊದೆಯ ।
ಕಟ್ಟುವೆಯಲಾ ತುರಗಮೇಧಮೇಗೈವುದಾ
ಹರಿಯ ಸಾನ್ನಿಧ್ಯಮಿರಲು ॥
ಹುಟ್ಟಿತಿಲ್ಲವೆ ನಿನಗರಿವು ಧರ್ಮಸೂನು ಮತಿ ।
ಗೆಟ್ಟಿಹನೆ ಶಿವಶಿವ ವೃಥಾ ಪರಿಭ್ರಮವೆ ನಿಮ ।
ಗೆಟ್ಟಿತೆಂದಮರೇಂದ್ರ ತನಯನಂ ಜರೆದು ಸೌ
ಭರಿ ನುಡಿದೊಡಿಂತೆಂದನು ॥ ೬ ॥

ಹರಿಯನುಳಿದಾವು ಬದುಕುವರಲ್ಲ ಚಿತ್ತದೊಳ್ ।
ಭರಿತನಾಗಿಹನಾವಗಂ ಧರ್ಮಸೂನು ಮರೆ ।
ದಿರನಾ ಮುರಾರಿಯ ನಿರೂಪದಿಂ ತೊಡಗಿಮಾ
ಡುವನೀ ಮಹಾಕ್ರತುವನು ॥
ತರಳತೆಯ ಮರವೆಗಿಂತರಿವನುಪದೇಶಿಪೊಡೆ ।
ಗುರುಗಳಲ್ಲವೆ ನೀವು ಧನ್ಯರಾದಪೆವಿನ್ನು ।
ಕರುಣದಿಂದೀ ಶಿಲೆಯೊಳೊಂದಿದ ತುರಂಗಮಂ
ಬಿಡಿಸಿಕೊಡಬೇಕೆಂದನು ॥ ೭ ॥

ಇನ್ನು ಚಿಂತಿಸದೆ ಕೃಷ್ಣಸ್ಮರಣೆಯಂ ಮಾಡಿ ।
ನಿನ್ನ ಹಸ್ತಸ್ಪರ್ಶನಂ ಗೆಯ್ದೊಡಾ ಕುದುರೆ ।
ಮುನ್ನಿನಂತವನಿಯೊಳ್ ನಡೆದಪುದು ಪೋಗುನೀ
ನೆಂದು ಸೌಭರಿ ನುಡಿಯಲು ॥
ತನ್ನೊಳಗೆ ತಾನೆ ವಿಸ್ಮಿತನಾಗಿ ಪಾರ್ಥನದ ।
ರುನ್ನತಿಯ ತುದಿ ಮೊದಲನರುಪೆನಲ್ ಜ್ಞಾನ ಸಂ ।
ಪನ್ನ ತಾಪಸನರ್ಜುನಂಗೆ ವಿಸ್ತರಿಸಿದಂ
ಮತ್ತೆ ಪೂರ್ವಾಪರವನು ॥ ೮ ॥

ಆಲಿಸಜ್ಜರ್ನ ಮುನ್ನ ವಿಪ್ರನುಂಟೋರ್ವನು ।
ದ್ದಾಲಕಾಖ್ಯಂ ತಿಳಿದನಖಿಳಶಾಸ್ತ್ರಂಗಳಂ ।
ಮೇಲೆ ವೈವಾಹದೊಳ್ ವಧುವಾದಳಾತಂಗೆ
ಚಂಡಿಯೆಂಬಾಕೆ ಬಳಿಕ ॥
ಕಾಲಕಾಲದ ಜಪಾನುಷ್ಠಾನಪೂಜೆಗಳಿ ।
ಗಾಲಸ್ಯಮಂ ಮಾಡದೆನ್ನ ಪರಿಚರ್ಯೆಗನು ।
ಕೂಲೆಯಾಗಿರ್ದು ಮನೆವಾಳ್ತೆಯಂ ಸಾಗಿಪುದು
ನೀನೆಂದೊಡಿಂತೆಂದಳು ॥ ೯ ॥

ಎಳ್ಳನಿತು ನಿನ್ನ ಮಾತಂ ಕೇಳ್ವಳೆಂದೆಣಿಕೆ ।
ಗೊಳ್ಳದಿರ್ ಪರಿಚರ್ಯೆ ಮನೆವಾಳ್ತೆಯೆಂದೆಂಬ ।
ತಳ್ಳಿಯುವಳಲ್ಲ ನೀನೆಂದುದಂ ಮಾಡೆನೆಂ
ದಾಚಂಡಿ ಚಂಡಿಪ್ರೋರೆ ॥
ಮುಳ್ಳಿಡಿದ ಮರವೇರಿದಂತಾದುದಿಹಪರಕೆ ।
ದೊಳ್ಳಿತಾದಪುದೆ ಬಂದುದು ತಪೋಹಾನಿಯೆಂ ।
ದಳ್ಳೆಯೊಳ್ ಕೋಲ್ಗೊಂಡ ತೆರದೊಳುದ್ದಾಲಕಂ
ಚಿಂತಿಸಂ ಪ್ರತಿದಿನದೊಳು ॥ ೧೦ ॥

ಇಂತಿರುತಿರಲ್ಕೆ ಕೌಂಡಿನ್ಯನೆಂಬೊರ್ವಮುನಿ ।
ಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ ।
ಚಿಂತೆವೆತ್ತಿರಲವನಿದೇನೆಂದು ಬೆಸೆಗೊಂಡೊಡವಳ
ಪ್ರತಿಕೂಲತೆಯನು ॥
ಅಂತರಿಸದೆಲ್ಲಮಂ ಪೇಳ್ದೊಡವನಿದಕೆ ನೀಂ ।
ಮುಂತೆ ವಿಪರೀತಮಂ ಮಾಡಲಾದಪುದೆಂದು ।
ಸಂತಾಪಮಂ ಬಿಡಿಸಿ ಬೀಳ್ಕೊಂಡಪಂ ತೀರ್ಥ
ಯಾತ್ರೆಗೈದಿದನಿತ್ತಲು ॥ ೧೧ ॥

ಉದ್ದಾಲಕಂ ಬಳಿಕ ತನ್ನ ಮಂದಿರದೊಳಿರು ।
ತಿದ್ದ ಸಮಯಕೆ ಪಿತೃಶ್ರಾದ್ಧದಿವಸಂ ಬಂದೊ ।
ಡೆದ್ದು ಚಂಡಿಯೊಳೆಲಗೆ ನಾಳೆ ಪೈತೃಕಮದಂ
ನಾಡಿದಲ್ಲದೆ ಮಾಡೆನು
ಕದ್ದು ತಹೆನೆಧಮಧಾನ್ಯ ವ್ರೀಹಿ ಶಾಕಮಂ ।
ಪೊದ್ದಲೀಯೆಂ ಶುದ್ಧವಸ್ತುಗಳನೊಂದುಮಂ
ತದ್ದಿನಕೆ ಮರುದಿವಸದೊಳ್ ಪೇಳ್ದುಬಹೆನಪಾ
ತ್ರಂಗೆಂದೊಡಿಂತೆಂದಳು ॥ ೧೨ ॥

ನಾಳೆ ಮಾಡಿಸುವೆನಾಂ ಪೈತೃಕವನುತ್ತಮದ ।
ಶಾಲಿಧಾನ್ಯ ವ್ರೀಹಿ ಶಾಕಮಂ ಕೊಂಡು ಬಹೆ ।
ನಾಲಯವನತಿಶುದ್ಧವಾದ ವಸ್ತುಗಳಿನ
ಲ್ಲದೆ ಕೂಡೆನಲ್ತಿಯಿಂದೆ ॥
ಪೇಳಿಸುವೆನಂದಿನ ದಿನದ ಮೊದಲ ರಾತ್ರಿಯೆ ವಿ ।
ಶಾಲಗುಣಸಂಪನ್ನ ವೇದಪಾರಂಗತ ಸು ।
ಶೀಲರಹ ಸತ್ಪಾತ್ರದವನಿಯಮರರ್ಗೆನಲ್
ಚಂಡಿಗವನಿಂತೆಂದನು ॥ ೧೩ ॥

ಆದೊಡೆ ಕುತುಪಕಾಲಮಂ ಬಿಡುವೆನರ್ಚನೆಯೊ ।
ಳಾದರಿಸೆನಾಂ ಬಂದ ವಿಪ್ರರಂ ಪಾಕದ ನ ।
ವೋದನ ಸುಪಾಯಸ ಗುಡಾಜ್ಯ ಮಧು ತೈಲಮೃದು
ಭಕ್ಷ್ಯ ಭೋಜ್ಯಾದಿಗಳನು ॥
ಸ್ವಾದುಫಲ ಶರ್ಕರ ವಿನುತ ಶಾಕ ನಿರ್ಮಲ ಪ ।
ಯೋದಧಿಗಳಂ ಸಕುತ್ಸಿತಮಾಗದಂತೆ ಸಂ ।
ಪಾದಿಸಿ ಪಿತೃಶ್ರಾದ್ಧಮಂ ಮಾಡಿ ವಸ್ತ್ರದ
ಕ್ಷಿಣೆಗಳಂ ಕೊಡೆನೆಂದನು ॥ ೧೪ ॥

ಎಂದೊಡೆ ಕುತುಪಕಾಲಮಂ ಮೀರಲೀಯೆನಾಂ ।
ಬಂದ ವಿಪ್ರರನಾದರಿಸಿ ಪೂಜೆಗೈಸದಿರೆ ।
ನಿಂದೊಲ್ಲೆನೆಂದೊಕ್ಕಣಿಸಿದಿನಿತನೆಲ್ಲಮಂ
ಸಂಪಾದಿಸದೆ ಮಾಣೆನು ॥
ತಂದಮಲವಸ್ತ್ರ ತಾಂಬೂಲ ವರದಕ್ಷಿಣೆಗ ।
ಳಿಂದೆ ಸತ್ಕರಿಸಿ ಕಳುಹಿಸದೆ ಬಿಡೆನೆನುತೆ ನಲ ।
ವಿಂದೊದವಿಸಿದಳಖಿಲಸದ್ದ್ರವ್ಯಮಂ ಬಳಿಕ
ಚಂಡಿ ಪಾಕಂಗೈದಳು ॥ ೧೫ ॥

ಕಂಡನೀತೆರನನುದ್ದಾಲಕಂ ಸಂತಸಂ ।
ಗೊಂಡು ಮನದೊಳ್ ಪೊರಗೆ ತಾನೊಪ್ಪದವನಾಗಿ ।
ಚಂಡಿ ಪೇಳಿದವೊಲಾ ಶ್ರಾದ್ಧಮಂ ಮಾಡಿಸಂ
ಪ್ರೀತಿಯಿಂ ವಿಪರೀತದ ॥
ಕೊಂಡುತೊಳಸಂ ಮರೆದು ಕರ್ಮಾಂಗಮಾಗಿರ್ದ ।
ಪಿಂಡಮಂ ತೆಗೆದು ಮಡುವಿನೊಳಿ ಹಾಯ್ಕೆಂದೊಡು ।
ದ್ದಂಡದಿಂದೆತ್ತಿ ಬೀದಿಗೆ ಬಿಸುಡಲಾದ್ವಿಜಂ
ರೋಷಭೀಷಣನಾದನು ॥ ೧೬ ॥

ಎಲೆಗೆ ನಿನ್ನೊಡನೆ ನಾನೇಂ ಹರಿಯಹೋರುವೆಂ ।
ಛಲಿತನಕಲಸಿದೆ ನೀನರೆಯಾಗಿ ಹೋಗೆಂದು ।
ಸಲೆ ಮುಳಿದು ಶಾಪವಂ ಕೊಟ್ಟು ಕಾರುಣ್ಯದಿಂ
ದಾದ್ವಿಜಂ ಕೂಡೆ ತಿಳಿದು ॥
ಕೆಲವು ಕಾಲಕೆ ನಿನ್ನೊಳಧ್ವರಹಯಂ ಬಂದು ।
ನಿಲಲರ್ಜುನಂ ಬಿಡಿಸಿದೊಡೆ ಮೋಕ್ಷಮಹುದೆಂದು ।
ಕೊಲಗಿದಂ ಸಂನ್ಯಾಸಕವನತ್ತಲವನಿಯೊಳ್
ಕಲ್ಲಾದಳಿವಳಿತ್ತಲು ॥ ೧೭ ॥

ಮೋಕ್ಷಮಹುದಾಗಿ ಚಂಡಿಗೆ ಶಾಪಮಿಾಗಳುಪ ।
ಸಾಕ್ಷಿಗೈತಂದು ನಿಂದುದು ಹಯಂ ನೀಂ ಮುಟ್ಟೆ ।
ಲೀಕ್ಷಣದೊಳೆದ್ದು ಪೋದಪುದು ಪೋಗಿನ್ನು ಮುಂ
ದಣ ನೃಪರ್ ಬಲವಂತರು ॥
ರಾಕ್ಷಸಾರಿಯನೆ ಮರೆಯದಿರೆಂದು ಸೌಭರಿ ನಿ ।
ರೀಕ್ಷಿಸಿ ಕೃಪಾವಲೋಕನದಿಂದೆ ವರಸಹ ।
ಸ್ರಾಕ್ಷನ ಕುಮಾರನಂ ಕಳುಹಲಾನತನಾಗಿ
ವಿನಯದಿಂ ಬೀಳ್ಕೊಂಡನು ॥ ೧೮ ॥

ತದನಂತರದೊಳರ್ಜುನಂ ಬಂದು ಕುದುರೆಯಂ ।
ಮುದದಿಂದೆ ಮುಟ್ಟಲದು ಬಿಟ್ಟು ನಡೆದುದು ಮುಂದ ।
ಕೊದರಿಕೊಳುತೆದ್ದು ನರನಂ ಕಂಡು ಚಂಡಿತಪ
ಕಾಗಿ ಕಳುಹಿಸಿಕೊಂಡಳು ॥
ಒದವಿದ ಸಮಸ್ತಜನಮಾಗ ವಿಸ್ಮಿತಮಾದು ।
ದುದಿರಿತು ಕುಸುಮವೃಷ್ಟಿ ಬಳಿಕ ದಕ್ಷಿಣಕೆ ನಡೆ ।
ದುದು ವಾಜಿ ಚಂಪಕಾಪುರಕಂದು ಹಿಂದೆಬಹ
ಪಡೆಸಹಿತ ವಹಿಲದಿಂದ ॥ ೧೯ ॥

ಘನಘೋಷದಿಂದ ವಾಹಿನಿಗಳೈತರುತಿರಲ್ ।
ವನಧಿ ಮೇರೆಯನತಿಕ್ರಮಿಸಿ ಬಂದಪುದೆಂದು ।
ಮುನಿದು ಭೂಮಂಡಲಮಿರದೆ ನಭಸ್ಥಳಕೆ ಪೋ
ಪಂತೆ ದೂಳೇಳುತಿರಲು ॥
ಅನುಸಾಲ್ವ ಸಾತ್ಯಕಿ ಪ್ರದ್ಯುಮ್ನ ಯೌವನಾ ।
ಶ್ವನರೇಶ ವೃಷಕೇತು ನೀಲಧ್ವಜರ ಸೈನ್ಯ ।
ಮನುಪಮಿತಮಾಗಿ ನಡೆದುದು ಚಂಪಕಾನಗರಿ
ಗರ್ಜುನನ ಹಯದ ಕೂಡೆ ॥ ೨೦ ॥

# ೩. ಚೆನ್ನಬಸವ ಪುರಾಣ ★ ★ ★ ★

## ಕವಿ - ಕಾವ್ಯಪರಿಚಯ

ಹಂಪೆಯ ಹಿರಿಯಮಠಕ್ಕೆ ಸೇರಿದ ವಿರೂಪಾಕ್ಷಪಂಡಿತನೆಂಬ ಕನ್ನಡಕವಿಯು ಕ್ರಿ. ಶಕದ ೧೬ನೆಯ ಶತಮಾನದಲ್ಲಿ ಬದುಕಿಬಾಳಿದವನು. ಇವನು ರಚಿಸಿದ ಕೃತಿಯು 'ಚೆನ್ನಬಸವ ಪುರಾಣ' ಒಂದೇ ಎಂದು ತೋರುವುದು. ಸಂಸ್ಕೃತ-ಕನ್ನಡ ಸಾಹಿತ್ಯಗಳೆರಡರಲ್ಲಿಯೂ ಇವನು ಪ್ರವೀಣತೆ ಪಡೆದಿದ್ದನೆಂಬುದಕ್ಕೆ, ಇವನ ಕೃತಿರಚನೆ ಪ್ರತ್ಯಕ್ಷ ಸಾಕ್ಷಿಯಾಗಿದೆ. ಇವನ ಊರು ಹಂಪೆಯೇ ಆದುದರಿಂದ, ಈತನ ಆರಾಧ್ಯದೇವತೆ ಹಂಪೆಯ ಶ್ರೀವಿರೂಪಾಕ್ಷನೇ ಸರಿ. ಈ ಕವಿಯ ತಂದೆ-ತಾಯಿಗಳಾರೆಂಬುದು ಗೊತ್ತಾಗುವಂತಿಲ್ಲ.

ಚೆನ್ನಬಸವಪುರಾಣವು ಒಂದು ಮಹಾಕಾವ್ಯ. ಇದು ಸಾಂಪ್ರದಾಯಿಕ ಶಬ್ದಾಲಂಕಾರ, ಅರ್ಥಾಲಂಕಾರಗಳಿಂದ ಕೂಡಿದ್ದು ಕರ್ಣಮನೋಹಾರಿಯಾಗಿದೆ. ವಾರ್ಧಕ ಷಟ್ಪದಿಯಲ್ಲಿ ರಚಿತವಾದ ಈ ಕಾವ್ಯ ಲಲಿತಬಂಧವನ್ನೊಡಗೊಂಡಿದೆ. ಹಾಡುಗಬ್ಬವಾದರೂ ಭಾಷೆಯ ಶುದ್ಧತೆಯನ್ನು ಕಾಯ್ದುಕೊಂಡಿದೆ.

ಚೆನ್ನಬಸವೇಶ್ವರನು ಸಿದ್ಧರಾಮುನಿಗೆ ಶಿವನ ೨೫ ಲೀಲೆಗಳನ್ನೂ ಶಿವಶರಣರ ಘನತೆಯನ್ನೂ ವಿವರಿಸಿ, ಆತನಿಗೆ ಶೈವದೀಕ್ಷೆಯನ್ನು ಕೊಟ್ಟ ಸಂಗತಿ ಇದರಲ್ಲಿ ಬಿತ್ತರಗೊಂಡಿದೆ.

ಚೆನ್ನಬಸವೇಶ್ವರನ ವಾಸಸ್ಥಾನವಾದ ಕಲ್ಯಾಣಪಟ್ಟಣದ ವರ್ಣನೆಯಲ್ಲಿಯ ಕೆಲವು ಪದ್ಯಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

* * * *

Funding: Tattva Heritage Foundation,Kolkata. Digitization: eGangotri.



# ಕಲ್ಯಾಣಪಟ್ಟಣದ ಪರಿಸರ

ಅತ್ತಲಾ ಪ್ರಭು ಸಿದ್ಧರಾಮಂಗೆ ಲಿಂಗದ ಮ |
ಹತ್ತನರುಹಿಸಿ ಕೊಡುವೆನೆಂದು ಕಲ್ಯಾಣದೊಳ |
ಗುತ್ತಮ ಶಿವಾಚಾರಿ ಚೆನ್ನಬಸವಂಬಸವ-
ನಿರಲವರ ಬಳಿಗಾತನ ||
ಚಿತ್ತಹರುಷದೊಳೆ ಕರೆತರುತಿರಲ್ ಮುಂದೆ ತೋ |
ರಿತ್ತು ಸುಕೃತದ ಬೀಡು ಸಿಂಗರದ ಜೋಡು ಸ |
ದ್ಭಕ್ತಿಯಿಹ ಗೂಡು ಸೊಗಸುವ ನಾಡು ನೋಡುತವ-
ರಡಿಯಿಟ್ಟು ಬರುತಿರ್ದರು || ೧ ||

ಎತ್ತ ನೋಡಿದೊಡೆ ನಿಗಮಂಗಳಿಂ ಪೊಂಗಳಿಂ |
ದೆತ್ತ ನೋಡಿದೊಡೆ ಗ್ರಾಮಂಗಳಿಂ ಪೆಂಗಳಿಂ |
ದೆತ್ತ ನೋಡಿದೊಡೆ ನಗರಾಳಿಯಿಂ ಶಾಳಿಯಿಂ
ದ್ರೋಣಾಮುಖಾಳಿಯಿಂದೆ ||
ಎತ್ತಲುಂ ಪತ್ತನಸಮಾಜದಿಂ ಭೂಜದಿಂ |
ದೆತ್ತಲುಂ ಖರ್ವಡನಿಕಾಯದಿಂ ಗೇಯದಿಂ |
ದೆತ್ತಲ್ ಕಡಂಬದ ಸಘಾಡದಿಂ ಖೇಡದಿಂ-
ದಾನಾಡ ಸಿರಿ ಮೆರೆದುದು || ೨ ||

ಅಲ್ಲಿಗಲ್ಲಿಗೆ ಬೆಳೆದ ಬೆಳೆಗಳಿಂ ಮೆಳೆಗಳಿಂ |
ದಲ್ಲಿಗಲ್ಲಿಗೆ ವನಸ್ಥಳಗಳಿಂ ಕೊಳಗಳಿಂ |
ದಲ್ಲಿಗಲ್ಲಿಗೆ ರನ್ನದರೆಗಳಿಂ ಕೆರೆಗಳಿಂ
ಪರಿವ ಪರಿಕಾಲ್ಗಳಿಂದೆ ||
ಅಲ್ಲಿಗಲ್ಲಿಗೆ ತೋರ್ಪ ಗಿರಿಗಳಿಂ ಕರಿಗಳಿಂ |
ದಲ್ಲಿಗಲ್ಲಿಗೆ ನೆರೆದ ಶುಕಗಳಿಂ ಪಿಕಗಳಿಂ |
ದಲ್ಲಿಗಲ್ಲಿಗೆ ಗವಾಸ್ಪದಗಳಿಂ ನದಗಳಿಂ
ದಾದೇಶಮೊಪ್ಪಿರ್ದುದು || ೩ ||

ಕಂಜಕುಮುದಂಗಳಿಲ್ಲದ ಸರಂ ಸರದಿಂದೆ ।
ರಂಜಿಸದ ಶುಕಪಿಕಂ ಶುಕಪಿಕಂಗಳ್ಗೆ ಫಲ ।
ಪುಂಜರಿಯನೀಯದಿಹ ಮಾವು ಮಾವುಗಳನ-
ಪ್ಪದಬಳ್ಳಿ ಬಳ್ಳಿಗಳೊಳು ॥
ಮಂಜುಳಧ್ವನಿಗುಡದ ಪರಮೆ ಪರಮೆಗೆ ಸಂತ ।
ಸಂ ಜನಿಸದರಲರಲ ನವಪರಿಮಳಂಗಳಿಂ ।
ದಂ ಜಡಿಯದೆಳಗಾಳಿಯೆಳಗಾಳಿಯಿಲ್ಲದಿಹ
ಬನಮಿಲ್ಲವಾ ನಾಡೊಳು ॥ ೪ ॥

ಪೊರೆಯದ ಸರಂಗಳಂ ಚಂದ್ರಕಾಂತಂಗಳಿಂ ।
ಮೆರೆಯದ ಧರಂಗಳಂ ಕಿವಿಗಮೃತಸಾರಮಂ ।
ಕರೆಯದ ಸ್ವರಂಗಳಂ ದುರ್ನೀತಿ ದುರ್ಮಾರ್ಗ
ದುಷ್ಕೀರ್ತಿಸಂತತಿಯನು ॥
ತೊರೆಯದ ಜನಂಗಳಂ ಸುರಪುರೋದ್ಯಾನಮಂ ।
ಜರೆಯದ ಬನಂಗಳಂ ಜಾತಿವೈರಂಗಳಂ ।
ಮರೆಯದ ಮೃಗಂಗಳಂ ಕಾಣೆನಾದೇಶದೊಳ-
ಗೇನೆಂಬನಚ್ಚರಿಯನು ॥ ೫ ॥

ದೇವಮಾತೃಕ ನದೀಮಾತೃಕದೊಳಂ ಬೆಳೆವು ।
ದಾವ ಚೋದ್ಯಂ ಗಿಳಿ ಕರ್ದುಂಕಿದೊಡೆ ಬೀಳ್ವಿನಿದು ।
ಮಾವಣ್ಣ ತನಿರಸದ ಕಾಲ್ಗಳಿಂ ಬೆಳೆವುವಾ
ಗಾಳಿಗಲೆದೋಸರಿಸುವ ॥
ತೀವಿದೆಳನೀರ ಕಬ್ಬಿನ ಸಾರದಿಂ ಬೆಳೆವು ।
ವಾವಗಂ ಪಾಮರೀಮುಖಶಶಿಗೊಸರ್ವಿಂದು ।
ಗ್ರಾವನಿರ್ಮಳಜಲದ ಪೂರದಿಂ ಬೆಳೆವುತಿಹ
ಶಾಳಿಗಳ್ ಕಣ್ಗೆಸೆದುವು ॥ ೬ ॥

ಶಾಳಿಗೆರಗಿದ ಗಿಳಿಗಳಂ ಸೋವ ಪಾಮರೀ ।
ಜಾಳದೊಂದುಲಿಪುಮಂ ಕೋಕಿಲನಿನಾದಮೆಂ ।
ದೇಳಿದಂಗೆಯ್ದು ತೊಲಗದೆ ನಿಂದ ಕೀರಾಳಿ
ಸಲೆ ಕಂಗೊಳಿಸಿತೆಂದೆನೆ ॥
ಭೂಲಲನೆಗಾ ಕಳಮೆ ಪ್ರಸವೋತ್ಸವಕ್ಕೆ ಸಂ ।
ಮೇಳಿಸಿದ ಕೆಂಪುಗೂಡಿದ ಹಸುರುಪಟ್ಟೆಯ ವಿ ।
ಶಾಲವಸನದ ಮುಸುಕಿದೆಂಬಿನಂಕಣ್ಗೆಸೆದು-
ದೇನೆಂಬೆನಚ್ಚರಿಯನು ॥ ೭ ॥

ಪಲವು ಕಾಲಂ ಬೆಳೆದಿದೇಂ ಫಲಂ ಕಡೆಯಲ್ಲಿ ।
ತಲೆಗೊಯ್ಸಿಕೊಂಬುದೆಂದುಂ ಬಿಡದೆನುತೆ ನಾಣ್ಚಿ ।
ತಲೆವಾಗಿದುವೊ ಪುತ್ರಮೋಹದಿಂ ಪ್ರತಿದಿನಂ
ತನ್ನ ನೋವಂ ನೋಡದೆ ॥
ಸಲಹಿದೀ ಭೂದೇವಿಗಂ ನಮಿಸಿ ಭಕ್ತಿಯಿಂ ।
ನಲಿದು ಬಾಗಿದುವೊ ಪೇಳೆಂಬಿನಂ ಕಿಕ್ಕಿರಿದ ।
ಫಲಭಾರದಿಂ ಕೊರಲ್ವಾಗಿ ಕಣ್ಗೊಳಿಸಿರ್ದ
ಶಾಲಿಗಳ್ ಕರಮೆಸೆದುವು ॥ ೮ ॥

ತುಂಡುತುಂಡಾಗಿ ಕತ್ತರಿಸಿ ಗಾಣದೊಳರೆದು ।
ಹಿಂಡಿ ರಸಮಂ ತೆಗೆದು ಕಾಸಿ ಕಾಲ್ದುಳಿಯಲುಂ ।
ಖಂಡಶರ್ಕರೆಯಾದೆವೇಗೈದೊಡಂ ಸುಗುಣ-
ಮಂಬಿಡದ ಸುಜನರಂತೆ ॥
ದಿಂಡುರುಳ್ಚಿದೆವಾಳ್ದಗಿದಿರಾದರಂ ಸುಕೋ ।
ದಂಡರೂಪಿಂ ಸ್ವಾಮಿಹಿತಕಿನ್ನು ತಮ್ಮೊಳು ।
ದ್ದಂಡತೆಯ ಬಿರುದೆತ್ತಿತೆನೆ ಸೋಗೆವಸುರ ಕ-
ಬ್ಬಿನ ಕೊರ್ಬು ಕಣ್ಗೆಸೆದುದು ॥ ೯ ॥

ಬೆಳೆಪ ನಾನಾ ಶಾಳಿಗದ್ದೆಗಳ ಪಾಳಿಗಳೊ ।
ಳುಲಿವ ಕೀರಾಳಿ ಸುಳಿಗಾಳಿಯಿಂ ಕೆದರ್ದ ಪೂ ।
ಗಳ ಧೂಳಿ ಪಾಡುವ ಮದಾಳಿ ಸತತಂ ಪಾಮ-
ರಿಯರೋಳಿ ಸಲೆ ಬಳಸಿವ ॥
ತೊಳಗುವ ವನಾಳಿಯೊಳ್ ಜನಕೇಳಿ ಮತ್ತ ಕೋ ।
ಕಿಳ ಕೇಕಿ ಹಂಸಾಳಿಯಂ ಕಾಣುತಿದು ಸ್ಮರನ ।
ಬಲುದಾಳಿಯೆಂದು ಪಾಂಥರ್ ಕಾಲುಗೆಟ್ಟನಿಂ
ದಿರೆ ನೋಡುತೆಯ್ತಂದರು ॥ ೧೦ ॥

ಸುರಿದ ಶಾಲ್ಯನ್ನರಾಶಿಗಳ ಘೃತಪೂರಿತದ ।
ಹರವಿಗಳ ಸೂಪಾದಿಶಾಕಸಂತತಿಯ ಪರಿ ।
ಪರಿಯ ಪಚ್ಚಡಿಯುಪ್ಪುಗಾಯ್ ಭಕ್ಷ್ಯಪರಮಾನ್ನ
ಬಹುವಿಧದ ಸೀಕರಣೆಯ ॥
ತರತರದ ದಧಿದುಗ್ಧತಕ್ರದಿಂ ಪುದಿದ ಕೊ ।
ಪ್ಪರಿಗೆಗಳನುಂಡುಂಡು ಪೋಪ ನಡೆತರ್ಪ ಪಥಿ ।
ಕರ ನೆರವಿಗಳ ಸತ್ರದಾಲಯಂ ರಂಜಿಸಿದು-
ದಾಪಥದೊಳೇನೆಂಬೆನು ॥ ೧೧ ॥

ತೋರಹೋರಿಗಳ ಡುರುಕಾರವಂ ಗಳದ ಘಂ ।
ಟಾರವಂ ಪಶುಗಳಂಬಾರವಂ ಕರುಗಳಂ ।
ಭೇರವಂ ಕರೆವ ಭೋರ್ಭೋರೀರವಂ ಮಂಥಾನ-
ದಾ ರವಂ ಗೊಲ್ಲತಿಯರ ॥
ಭೂರಿಭೂಷಾರವಂ ಕರುಗಳಂ ಕರೆವ ಗೋ ।
ಪಾರವಂ ಮಾರ್ಮಲೆತು ಪೋರ್ವ ಘನವೃಷಭಶ್ರೃಂ ।
ಗಾರವಂಗೂಡಿ ನಾನಾರವಂ ಕಿವಿಗಳಂ
ಪೂರೈಸಿತೇವೇಳ್ವೆನು ॥ ೧೨ ॥

ಮುಂತೆಸೆದುದಾಗಳಾ ಘನವಿಭವದಿಂ ಮುಕ್ತಿ ।
ಕಾಂತೆಯರಮನೆಯಂತೆ ಪುಣ್ಯದಾಲಯದಂತೆ ।
ಸಂತತಂ ಶೈವನೇಮದ ಕೋಶಗೃಹದಂತೆ
ಧರೆಯ ಮುಖಕಮಲದಂತೆ ॥
ತಿಂತಿಣಿಯೊಳೆಸೆವ ಸೌಧಂಗಳ ಮರೀಚಿ ಗಗ ।
ನಾಂತಮಂ ಚುಂಬಿಸಲ್ ಸಕಲಸೌಭಾಗ್ಯಮಂ ।
ತಾಂ ತಳೆದ ಪಟ್ಟಣಂ ಕಲ್ಯಾಣಮೆಸೆವ ಜಾ-
ಣರ ತಾಣಮೊಪ್ಪಿರ್ದುದು ॥ ೧೩ ॥

ಇಂತೆಸೆವ ಪಟ್ಟಣದ ಪೊರವಳಯದೊಳ್ ಲತಾ ।
ಸಂತತಿಗಳಿಂ ಕುಸುಮಶೋಭೆಯಿಂ ತರುಕುಲದ ।
ತಿಂತಿಣಿಗಳಿಂ ಫಲಾನೀಕದಿಂ ತಳಿರ್ವನೆಗ-
ಳಿಂಸುಳಿವ ತಂಗಾಳಿಯಿಂ ॥
ಮುಂತೆಸೆವ ಶುಕಪಿಕಸಮೂಹದಿಂ ತುಂಬಿವಿಂ ।
ಡಿಂ ತಳರ್ವ ಹಂಸಾಳಿಯಿಂ ನಗರದುಪವನಂ ।
ಕಂತುಸಂಜೀವನಂ ಪಾವನಂ ಪೆಂಪನಾಂ-
ತಾ ವನಂ ಕಣ್ಗೆಸೆವುದು ॥ ೧೪ ॥

ಪೊಸತೆಂಗು ಕೌಂಗು ಹೇರಿಳೆ ಕಿತ್ತಿಳೆ ಶೋ ।
ಭಿಸುವಂಚೆ ಕೊಂಚೆ ಪೂವಂಡು ಗಿಳಿವಿಂಡು ರಂ ।
ಜಿಸುವ ಕಾದಲರೆಲರ್ ಸವಿಮಾವು ಪೂವು ಬಕು-
ಳಂ ಮುಕುಳಮೊಪ್ಪುವ ಕೊಳಂ ॥
ಮಿಸುಪ ನಳಿನಂ ಪುಳಿನಮುಂ ತುಂಬಿ ತುಂಬಿ ರಾ ।
ಜಿಸುವಶೋಕಂ ಕೋಕಮಾದಾಡಿಮಂ ಹಿಮಂ ।
ದೆಸೆಗಂಪು ಸೊಂಪು ಪೆಂಪಿಂದೀ ಪುರೋಪವನ
ಮೆಸೆದಿರ್ದುದೇನೆಂಬೆನು ॥ ೧೫ ॥

ಸೋರ್ವ ರಸವಣ್ಗಳಂ ತಾಳ್ದ ಚೂತಂ ತುದಿಗೆ ।
ಪರ್ವಿದೆಲೆವಳ್ಳಿಯಿಂದೆಸೆವ ಪೂಗಂ ನಾಡೆ ।
ಕೊರ್ವಿ ತಿಂತಿಣಿವಣ್ಗಳಾಂತ ಕದಳಂ ಬೀಡೆ-
ವಣ್ ವಱಿವ ದಾಡಿಮಚಯಂ ॥
ಬೇರ್ವೆರಸಿ ತುದಿವರಂ ಕಾಯ್ತು ಪನಸಂಗಳೆಳ ।
ನೀರ್ವೊನಲುಮಂ ಕರೆವ ತೆಂಗು ಕಿಸುವಣ್ ಮುಸುಕಿ ।
ತೋರ್ವ ನಾರಂಗ ಜಂಬೀರಮಿನಿತುಂ ನಾಡೆ
ಸಾರ್ವಕಾಲಂ ಕುಂದವು ॥ ೧೬ ॥

ಪೆಣ್ಗಳಾಡುವ ತಳಿರ್ವನೆಗಳಿಂ ನನೆಗಳಿಂ ।
ಕಣ್ಗೊಳಿಪ ಕುಸುಮಿತಲತಾಳಿಯಿಂ ಕೇಳಿಯಿಂ ।
ಜಾಣ್ಗಾಡಿವಡೆದ ದಂಪತಿಗಳಿಂ ರತಿಗಳಿಂ
ನಲಿವ ಚಕ್ರಂಗಳಿಂದೆ ॥
ಪಣ್ಗಳಂ ಸವಿವ ಗಿಳಿವಿಂಡಿನಿಂ ಬಂಡಿನಿಂ ।
ತಣ್ಗಾಳಿಯಿಂ ಪೊರೆವ ಕಮಲದಿಂ ವಿಮಲದಿಂ ।
ದೆಣ್ಗಡೆಗೆ ರಂಜಿಪ ಕೊಳಂಗಳಿಂ ಕಂಗಳಿಂ
ನೋಡೆ ಬನಮೆಸೆದಿರ್ದುದು ॥ ೧೭ ॥

ಸುರವನದೊಲಾಂ ಸುಡಿಸಿಕೊಂಡೆನೇ ನಾಡೆ ದಶ ।
ಶಿರನ ವನದಂತೆ ಕಪಿಯಿಂ ಭಂಗವಡೆದೆನೇ ।
ನಿರುತಮಾ ಧನದವನದಂತೆ ರಾಕ್ಷಸರ ಕಾ-
ಲ್ದುಳಿತಕ್ಕೆ ಪಕ್ಕಾದೆನೇ ॥
ಸರಿಯೆ ಲೋಕದ ವನಂ ತನಗೆಂಬ ಪೆರ್ಮೆಯಿಂ ।
ಮೊರೆವ ತುಂಬಿಗಳಿಂದೆ ಪರಪುಟ್ಟನಿಂದೆ ಬಿ ।
ತ್ತರಿಸಿ ಪಾಡಿಸಿ ಪೊಗಳಿಪಂತೆ ಪುರಮಂ ಬಳಸಿ-
ದುಪವನಂ ಕಣ್ಗೆಸೆದುದು ॥ ೧೮ ॥

ನವಿಲ ನಟನೆಯೆ ನರ್ತನಂ ಮೊರೆವ ತುಂಬಿಗಳ ।
ರವಮೆ ಗೀತಂ ಕೋಕಿಲಧ್ವನಿಯೆ ವಾದ್ಯಮೊ ।
ಪ್ಪುವ ಮರುತನಿಂ ಕೆದರ್ವ ಕುಸುಮಂಗಳೆಸೆವ ಪು-
ಷ್ಪಾಂಜಲಿಗಳಂದಮಾಗೆ ॥
ನವಪಾತ್ರಮಂ ವಸಂತಂ ತಿರ್ದಿ ತಂದಂಗ ।
ಭವನ ಮುಂದಾಡಿಸಲ್ ಸಮೆದಿರ್ದ ಸಲ್ಲಾಸ್ಯ ।
ಭವನದಂತೊಪ್ಪಿರ್ದುದುಪವನಂ ಪವನಪದ-
ಚರರಿಗಚ್ಚರಿಯಿಾವುತೆ ॥ ೧೯ ॥

ಪುರದ ಕೋಂಟೆಯ ತೆನೆಯೊಳಲ್ಲಲ್ಲಿ ಕೀಲಿಸಿದ ।
ವರಪದ್ಮರಾಗ ನೀಲದ ಕಾಂತಿ ರಂಜಿಸುವ ।
ಮರಕತದ ಕಾಂತಿ ಮುತ್ತಿನ ಕಾಂತೆಯಿನಿತುಮಿಾ
ವನದೊಳಗೆ ಪ್ರತಿಬಿಂಬಿಸಿ ॥
ಸರಸಕಿಸಲಯಚಯಂ ತುಂಬಿಗಳ್ ಶೋಭಿಸುವ ।
ತರುಪತ್ರತತಿಪುಷ್ಪಸಂದೋಹಮಪ್ಪುವೆಂ ।
ಬುರುಶಂಕೆಯುಂ ಪುಟ್ಟೆ ನಗರಮಂ ಬಳಸಿದುಪ-
ವನಚಯಂ ಚೆಲ್ವಾದುದು ॥ ೨೦ ॥

# ೪. ಸಮ್ಯಕ್ತ್ವಕೌಮುದಿ ★ ★ ★ ★

## ಕವಿ - ಕಾವ್ಯಪರಿಚಯ

ಕವಿ ಮಂಗರಸನು ಕ್ರಿ. ಶ. ೧೬ ನೆಯ ಶತಮಾನದ ಪ್ರಾರಂಭದಲ್ಲಿ ಇದ್ದವನು. ಇವನು 'ಹೊಯಿಸಳ ದೇಶದ ಹೊಸವೃತ್ತಿನಾಡಿನ ಧಾತುಪುರ (ಕಲ್ಲಹಳ್ಳಿ)' ಎಂಬಲ್ಲಿ ಹುಟ್ಟಿ ಬೆಳೆದವನು. ಇವನು ಹುಟ್ಟಿದುದು ಚೆಂಗಾಳ್ವರಾಜರ ಮಂತ್ರಿಗಳ ವಂಶದಲ್ಲಿ. ಈತನ ತಂದೆ ವಿಜಯರಾಜ, ತಾಯಿ ದೇವಿಲಿ. ಜೈನಧರ್ಮದ ಅನುಯಾಯಿ. ಕನ್ನಡ ಸಾಹಿತ್ಯದಲ್ಲಿ ಈತನಿಂದ ರಚಿತವಾದ ಆರು ಗ್ರಂಥಗಳು ಶೋಭಿಸುತ್ತಿವೆ. 'ಸೂಪಶಾಸ್ತ್ರ' ಎಂಬುದೊಂದು ಪದ್ಯಮಯ ಗ್ರಂಥವನ್ನು ಈ ಕವಿ ಬರೆದಿದ್ದಾನೆ. ಅದರಲ್ಲಿ ಬೇರೆ ಬೇರೆ ಉಣಿಸು-ತಿನಿಸುಗಳನ್ನು ಸಿದ್ಧಪಡಿಸುವ ಅಡಿಗೆಯ ವಿಷಯವನ್ನು ಶಾಸ್ತ್ರೀಯವಾಗಿ ವಿವೇಚಿಸಿದ್ದಾನೆ.

'ಸಮ್ಯಕ್ತ್ವಕೌಮುದಿ' ಎಂಬ ಈತನ ಕೃತಿಯು ಜೈನಧರ್ಮಾಚಾರಬೋಧಕವಾದ ಸ್ವಾರಸ್ಯಪೂರ್ಣ ಕಥೆಗಳಿಂದ ತುಂಬಿದೆ. ಇಲ್ಲಿ ಆಯ್ದುಕೊಂಡ ಕಥೆಯಲ್ಲಿ, ತನ್ನ ದೊರೆಯ ಅವಕೃಪೆಗೆ — ವಿನಾಕಾರಣ — ಪಾತ್ರನಾದ ಯಮದಂಡನೆಂಬ ನಗರರಕ್ಷಕನು, ದಿನಕ್ಕೊಂದು ನೀತಿಯ ಕಥೆಯನ್ನು ಹೇಳಿ, ದೊರೆಯ ಮನಸ್ಸಿಗೆ ಸರಿಯಾದ ತಿಳಿವು ಉಂಟಾಗುವಂತೆ ಮಾಡುತ್ತಾನೆ. ಅವನು ಹೇಳಿದ ಅನೇಕ ಕಥೆಗಳಲ್ಲಿ ಒಂದು ಈ ಸುಧರ್ಮರಾಜನ ಕಥೆ. ಮಾನವತೆಯನ್ನು ಜಾಗೃತಗೊಳಿಸುವಂತಹ ಕಥೆಯಿದು.

* * * *

# ಸುಧರ್ಮರಾಜನ ಕಥೆ

ಪರಿರಂಜಿಸುತ್ತಿರ್ಪ ಪಾಂಚಾಳದೇಶದೊಳ್ ।
ಪರಶಕ್ತಿನಗರಮುಂಟೆಂಬುದಂತದನಾಳ್ವ ।
ಪರಮಧಾರ್ಮಿಕನು ಜೈನಮತಾನುಸಾರಿ ಸ-
ದ್ಗುಣಯುತ ಸುಧರ್ಮನೆಂಬ ॥
ಅರಸು ಜಿನದತ್ತೆಯೆಂದೆಂಬ ಸತಿಗೂಡಿ ಸು- ।
ಸ್ಥಿರನಾಗಿ ಭೂಭಾರಮಂ ನಿಜಭುಜದೊಳಾಂತು ।
ಸುರಪತಿಸಮಾನವೈಭವದಿಂದ ಸುಖಸಂಕ-
ಥಾವಿನೋದದೊಳಿರ್ಪನು ॥ ೧ ॥

ಪರಮಂಡಲವನು ಸಾಧಿಸುವೆನೆಂಬೊಂದಿಚ್ಛೆ ।
ಪಿರಿದಾಗಿ ಪುಟ್ಟಲುತ್ತಮಲಗ್ನದೊಳ್ಪುರಮ- ।
ನಿರದೆ ಪೊರಮಟ್ಟು ದಂಡೆತ್ತಿ ನಡೆದಂಗಕಾ-
ಶ್ಮೀರಘೂರ್ಜರಕೇರಳ ॥
ವರಕೋಸಲಾದಿ ಛಪ್ಪನ್ನದೇಶದ ಮಹೀ- ।
ವರರನೆಲ್ಲರನು ಕಾಣಿಸಿ ಕಪ್ಪಮಂ ಕೊಂಡು ।
ಹರಿಸದಿಂ ಮಗುಳ್ದು ಮಹದೈಶ್ವರ್ಯಯುತನಾಗಿ
ನಗರಿಯಂ ಪುಗುವಾಗಳು ॥ ೨ ॥

ಘೋಳಿಡುತ ಬೆಟ್ಟು ಬಿಳ್ವಂತೆ ನಗರಿಯ ಕೋಂಟೆ ।
ಬೀಳಲದ ಕಂಡು ಶಕುನಿಗರೆಂದರೆಲೆ ಮಹೀ- ।
ಪಾಲಕಾ ಅದ್ಭುತದ ಶಕುನಮಂ ನೋಡಿ ನೀಂ
ನಗರಿಯಂ ಪುಗಲು ಬೇಡಾ ॥
ನಾಳಿನುದಯಕ್ಕೆ ಕೋಂಟೆಯನಿಕ್ಕಿಸಿದ ಬಳಿಕ ।
ಪಾಳೆಯಂ ಸಹಿತ ಬಿಜಯಂಗೆಯ್ವುದೆಂಬ ನುಡಿ ।
ಗೇಳಿಯಂತೆಯೆ ಗೆಯ್ವೆನೆಂದು ತಡಗೆಯ್ದು ಮರು-
ದಿನದೊಳತಿರಚನೆಯಿಂದ ॥ ೩ ॥

ಚೆನ್ನಾಗಿ ಕೋಂಟೆಯಂ ಹಸಗೆಯ್ಸಿ ಪುಗುವಾಗ ।
ಮುನ್ನಿನಂದದಿ ಮೂರು ದಿನ ಬೀಳೆ ಕಾಣುತತಿ ।
ಖಿನ್ನಮಾನಸನಾಗಿ ಬಿರುಮಳೆಯೆ ಹತ್ತಿದಂ-
ದದಿನಾ ಮಹೀಪಾಲನು ॥
ತನ್ನ ಜಯದೇವನೆಂದೆಂಬ ಮಂತ್ರಿಯ ಕರೆಸಿ ।
ಯಿನ್ನಿದಕ್ಕಾವುದೊ ಉಪಾಯಮೆನೆ ಚಾರ್ವಾಕ- ।
ಮನ್ನೆವ್ಮಿದವನಾಗಿಯರಸನೊಡನವನಿಂತು
ಬಿನ್ನಪಂಗೆಯ್ದನಾಗ ॥ ೪ ॥

ನರಬಲಿಯನಿತ್ತ ಬಳಿಕಾ ಬಿಸಿಯ ನೆತ್ತರಂ ।
ಪೊರೆದ ಮಣ್ಣಿಂದಲ್ಲದೀ ಕೋಂಟೆ ನಿಲ್ಲದೆನೆ ।
ಕರುಣಾರ್ದ್ರಹೃದಯನಾ ನುಡಿಗೇಳಿ ಕಿವಿಮುಚ್ಚಿ
ಯಿಂತಪ್ಪ ಹಿಂಸೆಯಿಂದ ॥
ಸಿರಿಹಾರಿಯಾಯುಷ್ಯವಡಗಿ ಸದ್ಗತಿ ಕೆಟ್ಟು ।
ನರಕದೊಳ್ ಜನಿಸಿ ಕೋಟಲೆಬಡುವುದದರಿಂದ ।
ವರಮಂತ್ರಿ ಕೇಳಿದಕ್ಕಾನೊಡಂಬಡುವುದಿ-
ಲ್ಲೆನಲುಜಯದೇವಮಂತ್ರಿ ॥ ೫ ॥

ಎಲ್ಲಿಯದು ಪಾಪಮೆಲ್ಲಿಯದು ಪುಣ್ಯಂ ಸ್ವರ್ಗ- ।
ಮೆಲ್ಲಿಯದು ನರಕಮೆಲ್ಲಿಯದು ಜೀವನವು ತಾ- ।
ನೆಲ್ಲಿಯದು ನೋಡೆ ಭೌತಿಕಯೋಗದಿಂದಾದ
ದೇಹಕ್ಕೆ ಮರುಜನ್ಮವು ॥
ಎಲ್ಲಿಯದಿದೆಂದು ಬಗೆಯೊಳಗೆ ಬಗೆಯದೆ ಬರಿದೆ ।
ಗೊಲ್ಲಸಂಗೊಂಡು ದೇಹವನು ದಂಡಿಪುದು ಜಗ ।
ಮೆಲ್ಲಮೆನಲಾ ನುಡಿಯ ಕೇಳಿ ಮತ್ತಾ ನೃಪತಿ
ಯಿಂತೆಂದು ನುಡಿದನಾಗ ॥ ೬ ॥

ಪಾಪಮುಂ ಪುಣ್ಯಮಿಲ್ಲದೊಡೆ ಭೃತ್ಯರ್ಕೆಲರ್ ।
ಭೂಪತಿಗಳುಂ ಕೆಲಬರಾಗಿ ಪುಟ್ಟಲದೇಕೆ ।
ಆಪತ್ತುಸುಖಮದೇತಕ್ಕೆ ಮರುಜನ್ಮಮಿ-
ಲ್ಲದೊಡೆ ಸತ್ತಾ ಗ್ರಹಗಳಾ ॥
ರೂಪಾಗಿ ಮುನ್ನೆನ್ನ ಕೊಂದೆಯಲ್ಲಾ ಎನುತ ।
ಕೋಪದಿಂ ಬಂದು ಪಗೆವರ ಕಾಡುತಿರಲೇಕೆ ।
ಈ ಪರಿಯನರಿದಿರ್ದು ಚಾರ್ವಾಕಮಂ ನಂಬಿ
ಹಿಂಸೆಯಂ ಮಾಡಬಹುದೇ ॥ ೭ ॥

ವರಸುಜನರೆಂಬ ನುಡಿಗುತ್ತರಮನರಿಯದೇ ।
ಪುರಜನವ ಬರಿಸಿಯವರುಂ ತಾನುಮಿಂತೆಂದ- ।
ರರಸ ನೀವೆಸಗಿಸಲ್ವೇಡ ನಾವೇ ಮಾಳ್ಪ-
ವೆನೆ ಕೇಳುತಿಂತೆಂದನು ॥
ನಿರುತದಿಂ ಪ್ರಜೆ ಮಾಡಿದಾ ಪುಣ್ಯಪಾಪಫಲ- ।
ಮಿರದಹುದು ಷಡ್ಭಾಗದೊಳಗೊಂದು ಭಾಗಮಾ ।
ನರಪಾಲಕಗ್ಗೆಂಬ ನಾಣ್ಣುಡಿಯನರಿದಿರ್ದು-
ಮೊಡಬಡುವುದಿಲ್ಲವೆನಲು ॥ ೮ ॥

ಅರಸೊಬ್ಬನಲ್ಲದಾ ಊರೊಳಿಪ್ಪರ್ವರೆಲ್ಲ ।
ನೆರೆದಿಂತು ತಮ್ಮೊಳಾಲೋಚನೆಯ ಮಾಡಿದರ್ ।
ಪುರದ ಕೋಂಟೆಗೆ ಬಲಿಯು ಕೊಡದೊಡರಸಗೆ ಕೇಡು
ಮುಂದಕ್ಕೆ ತಪ್ಪದಹುದು ॥
ಅರಸು ಕೆಟ್ಟೊಡೆ ಕೇಡು ನಮಗೆಯದರಿಂದವಿಾ ।
ಯರಸನಂ ಮಿಾರೆ ರಾಜದ್ರೋಹಮಿಲ್ಲೆಂದು ।
ಪಿರಿದಾಗಿ ನಿಶ್ಚಯಿಸಿ ತತ್ಪುರದೊಳಾ ನೃಪತಿ-
ಯಲ್ಲಿಗಾಪೋಗದಂತೆ ॥ ೯ ॥

ಮೊರೆದೆದ್ದು ಸಕಲ ರಾಣುವೆಯೊಂದು ಹುರಿಯಾಗಿ ।
ಪುರವರದೊಳೆತ್ತಿ ಹದಿಕೆಯನು ತದ್ವಿತ್ತದಿಂ ।
ನರರೂಪನೊಂದನನುಗೆಯ್ಸಿ ಮಣಿದೊಡವಿಟ್ಟ
ಬಳಿಕೊಂದು ರಥದ ಮೇಲೆ ॥
ಇರಿಸಿ ಕೆಲದೊಳಗೊಂದು ಲಕ್ಕ ಪೊನ್ನಂ ಸುರಿದು ।
ಪುರದ ಬೀದಿಯೊಳದಂ ನಡೆಯಿಸುತ್ತಿಂತೆಂದು ।
ಪರಿದು ಸಾರಿಸಿದರೀ ಪೊನ್ನ ಪುತ್ತಳಿಯನೀ
ಪೊನ್ನ ರಾಸಿಯನೆ ಕೊಂಡು ॥ ೧೦ ॥

ಹಡೆದ ಮಗನಂ ಕೊಟ್ಟು ವಿಷಮನಾತನ ಜನನಿ ।
ಕುಡಿಯೆಂದು ಕೂರಸಿಯನಾ ತಂದೆ ಹಿಡಿದವನ ।
ಕಡಿದು ನರಬಲಿಯನೀ ಕೋಂಟೆಗೆ ಕೊಡುವರುಂಟೆ
ಎಂದು ಡಂಗುರವ ಹೊಯ್ಸಿ ॥
ಪೊಡವಿಯೊಳಗಿಂತಪ್ಪ ಘಾತಮಂ ಮಾಡುವುದ- ।
ಕೊಡಬಡುವ ಪಾತಕಿಗಳುಂಟೆ ಎನುತೆಲ್ಲರೆಡೆ- ।
ವಿಡದೆ ಕಿವಿಯಂ ಮುಚ್ಚುತಿರಲದಂ ಕೇಳಿ
ಬಳಿಕದರೊಳತಿದಾರಿದ್ರನು ॥ ೧೧ ॥

ವರದತ್ತನೆಂಬ ಪಾರ್ವ್ವಂ ತನ್ನ ನಿಜಸುದತಿ ।
ವರದತ್ತೆಯೆಂಬಳೊಳಗಿಂತೆಂದು ನುಡಿದನೀ ।
ಪುರದೊಳುಳ್ಳಷ್ಟಾದಶಪ್ರಜೆಯ ಬಡವರೊಳ್
ನಾಡೆ ನಾನೇ ಬಡವನು ॥
ತಿರಿದಾವ ತೆರದಿ ಹೊಟ್ಟೆಯ ಹೊರೆವುದಕ್ಕೆ ನಾ- ।
ವೆರಡೆಯೊಡಲಲ್ಲ ಕಿರುಮಕ್ಕಳಿವರೆಣ್ಬರೀ ।
ಪರಿಯಾದ ಬಹುಕುಟುಂಬವ ಪೊರೆವುದಕ್ಕಾವ
ತೆರನೆಂದು ನುಡಿದನಾಗ ॥ ೧೨ ॥

ಸಿರಿಯುಳ್ಳವನೆ ಶೀಲನಿಧಿ ಸುಗುಣಿ ಸುವಿವೇಕಿ- ।
ಯುರುಪುಣ್ಯವಂತನಭಿಮಾನಿಯುತ್ತಮಗುಣಾ- ।
ಭರಣನತಿಬುದ್ಧಿವಂತಂ ಗುರುವನೇಕವಾ-
ಕ್ಯಪ್ರತಿಷ್ಠಾಚಾರ್ಯನು ॥
ಸಿರಿಯಿಲ್ಲದವನು ಕುಲಹೀನನವಿವೇಕಿ ದು- ।
ಶ್ಚರಿತನಾರಡಿಕಾರ ಭೂಭಾರಕಂ ಪಿಸುಣ- ।
ನುರುತರದ್ರೋಹಿಯನ್ನೆಯಕಾರನೆಂದು ನೆಲ-
ನೆಲ್ಲ ನುಡಿಯುತ್ತುಮಿಹುದು ॥ ೧೩ ॥

ಹೊತ್ತುಗಳೆವನ್ನೆವರವಿಾ ಪುರದ ಕೇರಿಯೊಳ್ ।
ಸುತ್ತಿ ಮುಷ್ಟಿಯ ಬೇಡಿ ತಂದಕ್ಕಿಯಡುಗೆಯೊಂ- ।
ಬತ್ತೊಡಲಿಗದ್ದರ್ವರಿಗುಂಟದ್ದರ್ವರಿಗಿಲ್ಲ-
ಮೊಡಲಾರಿ ನವೆದು ಬಳಿಕ ॥
ಸತ್ತು ಸುಡುಸುಣ್ಣವಪ್ಪುದರಿಂದವಿಾ ತಂದ ।
ವಿತ್ತಮಂ ಕೊಂಡು ನಮ್ಮಾ ಕಿರಿಯ ಮಗನಿಂದ್ರ-
ದತ್ತನಂ ಕೊಟ್ಟು ನಾವೆಲ್ಲರುಂ ಬದುಕುವುದು-
ಪಾಯಮೆಂದಾ ಪಾರ್ವನು ॥ ೧೪ ॥

ಆ ಸತಿಯನೊಡಬಡಿಸಿ ಪರಿದು ಬೀದಿಗೆ ಬಂದು ।
ಘೋಷಣೆಯ ನಿಲಿಸಿಯಾ ಬೊಂಬೆಯಾ ಹೊನ್ನ ಬಲು ।
ರಾಶಿಯಂ ಕೊಂಡು ಕೊಕ್ಕರಿಸದೇ ತನುಜನಂ
ಕೊಟ್ಟು ಶಕಟಮನೇರಿಸಿ ॥
ಓಸರಿಸದಾ ತಾಯಿ ವಿಷಮನಾ ನಿಜಜನಕ- ।
ನಾ ಸುರಗಿವಿಡಿದು ಬಂಡಿಯ ಬಳಿಯೊಳೆಯ್ದುತಿರೆ ।
ದೇಶಮೆಲ್ಲಾ ವಿಸ್ಮಯವನು ನೋಡುವೆವೆಂದು
ಜನಜಾತ್ರೆಯಾದುದಾಗ ॥ ೧೫ ॥

ಹಡೆದ ಮಗನಂ ಪೆತ್ತ ತಂದೆತಾಯ್ಗಳು ಮರುಕ- ।
ವಡೆಯದರ್ಥವ ಬಯಸಿ ಕೆಯ್ಯಾರೆ ತಲೆಯ ಹರಿ- ।
ಗಡಿದು ಕೋಂಟೆಗೆ ಬಲಿಯ ಕೊಡುವರಗುಲಿಯನು ಬಿಡಿ-
ಸುವೆನೆಂದು ಭೂಪಾಲನು ॥
ನಡೆದು ಕೋಂಟೆಯ ಮುಂದೆ ಕುಳ್ಳಿರ್ದ್ದ ಕಡುಹರಿಸ ।
ವಡೆದು ಹೃದಯದೊಳಿನಿಸು ದಬ್ಬುದಲೆಯಿಲ್ಲದೇ ।
ನುಡಿಯುತೊಳ್ನುಡಿಯ ನಸುನಗೆಯಿಡುವ ಮಾಣವಕ
ನಂ ಕಂಡು ನುಡಿದನಿಂತು ॥ ೧೬ ॥

ಈಗಳೊಂದಿನಿಸು ಹೊತ್ತಿಗೆ ಹರಕೆದೆಗೆದ ಕುರಿ- ।
ಯಾಗಿ ಕೊರಲಂ ಕೊಯ್ಸಿಕೊಂಡು ಭೂತಕ್ಕೆ ಬಲಿ- ।
ಯಾಗುತಿದೆಯೆನ್ನ ಮೆಯ್ಯೆಂಬುದೊಂದೆದೆಹಾರು-
ತನದ ಸಂಕಟವ ಮರೆತು ॥
ಬೇಗೆಯಿಂ ಕಾದುಕ್ಕುವುದಕದೊಳ್ಕಮಲವಲ ।
ರಾಗುವಂದದೊಳು ನಗೆಮೊಗವೇಕೆನಲ್ ಸಾನು ।
ರಾಗದಿಂದಾ ಮಹೀಪಾಲಕನ ಕೂಡೆಯಪ-
ನಿಂತೆಂದು ನುಡಿದನಾಗ ॥ ೧೭ ॥

ಜನಪ ಕೇಳ್ ಜನನಿ ಮುನಿದೊಡೆ ಜನಕನೇ ಶರಣು ।
ಜನಕ ಮುನಿದೊಡೆ ಜನನಿಯೇ ಶರಣು ಪರಿಜನಂ ।
ಮುನಿಯೆ ಜನಪಾಲಕನೆ ಶರಣು ಜನನಾಥ ಮುನಿ
ಯಲ್ಕೆ ಪರಿವಾರ ಶರಣು ॥
ಜನನಿ ಜನಕಂ ಪರಿಜನಂ ಭೂಮಿಪಾಲಕರು ।
ಮುನಿಯೆ ದೈವವೆ ಶರಣು ತದ್ದೈವಮುಂ ಮುನಿಯೆ ।
ನಿನಗಿನ್ನದಾರು ಶರಣೆಂಬ ಬಿಸವಂದಮಂ
ಕಂಡಿಂತು ಚಿಂತಿಸುವೆನು ॥ ೧೮ ॥

ಎಂದು ಪರಮಾರ್ಥವನೆ ನುಡಿವ ಭೂಸುರಸುತನ- ।
ದೊಂದು ಧೈರ್ಯವ ಕಂಡು ನಗರದೇವತೆಗಳಿ- ।
ಯ್ತಂದು ಕಡುಬೆಚ್ಚಿಯಾ ಕೋಂಟೆಯಂ ನಿರ್ಮಿಸಿ ಬ-
ಳಿಕ್ಕೆ ಪೂಮಳೆಯ ಕರೆದು ॥
ಅಂದವನನೊಸೆದು ನವರತ್ನಭೂಷಣ ವಸ್ತ್ರ- ।
ದಿಂದ ಪೂಜಿಸಿ ಲೋಕದೊಳಗೆ ನೀನಲ್ಲದೇ ।
ಸಂದ ಸಾಹಸಿಗರಾರೆಂದು ಬಾಯೆತ್ತಿ ಜಗ-
ವರಿವಂತೆ ಪೊಗಳ್ದುವಾಗ ॥ ೧೯ ॥

---

# ಶಬ್ದಾರ್ಥಸೂಚಿ

## ಗದ್ಯಭಾಗ

### ೧. ಸಮಸ್ತಭಾರತಸಾರ

ಅ

ಅಡಗು = ಮಾಂಸ
ಅಡುಕಳ = ಅಡುಗೆಯ ಮನೆ
ಅಣುವ = ಹನುಮಂತ
ಅಬ್ದ = ವರ್ಷ
ಅರಿಗ = (ಪಂಪಕವಿಯು ಕರೆದ ಹೆಸರು) ಅರ್ಜುನ
ಅರಣಿ = ಯಜ್ಞಕ್ಕಾಗಿ ಅಗ್ನಿಯನ್ನು ಹುಟ್ಟಿಸುವ ಉಪಕರಣ
ಅಲಂಘ್ಯ = ದಾಟಲಾಗದ; ಕಷ್ಟಸಾಧ್ಯ
ಅವಗಡ = ಕುತ್ತ; ಆಪತ್ತು
ಅವಧ್ಯ = ಕೊಲ್ಲಲು ಅಸಾಧ್ಯವೆನಿಸಿದವ
ಅಳವಿ = ಪ್ರಮಾಣ; ಮಟ್ಟ
ಅಳಿಪು = ದುರಾಶೆ
ಅಳಿವೆಸನ = ಕೀಳುಕೆಲಸ
ಅಳ್ಳೆ = ಪಕ್ಕೆ; ಪಕ್ಕಡಿ
ಅಂಕವಣಿ = ಚಿತ್ರಾಲಂಕೃತವಾದ ಕುದುರೆಯ ಜೀನು, ಥಡಿ
ಅಂಜನ = ಕಾಡಿಗೆ
ಅಂಜಲಿಪುಟ = ಬೊಗಸೆ

ಆ

ಆಟಿಪೊಡೆ = ಬಯಸುತ್ತಿದ್ದರೆ
ಆಣತಿ (ತ್ಸ) ಆಜ್ಞಪ್ತಿ = ಅಪ್ಪಣೆ
ಆಭಿಚಾರಿಕ = ಮಾಟಗಾರ; ಚೇಟುಕ
ಆಯತಿಯಿಂ = ಕ್ರಮವಾಗಿ; ಓರಣವಾಗಿ
ಆರ್ಪೊಡೆ = ಸಮರ್ಥನಾದರೆ
ಆರಂಗ = ವೇದದ ಆರು ಅಂಗಗಳು (ಶಿಕ್ಷಾ, ನಿರುಕ್ತ, ವ್ಯಾಕರಣ ಇತ್ಯಾದಿ)
ಆಸ್ಫೋಟಿಸು = ಅಪ್ಪಳಿಸು

ಇ

ಇಷ್ಟಿ = ಯಜ್ಞ

ಉ

ಉದಾರಮಹೇಶ್ವರ = (ಇಲ್ಲಿ) ಅರ್ಜುನ

ಎ

ಎಡರು = ಪ್ರತಿಭಟಿಸು
ಎರೆಯ = ಒಡೆಯ; ಯಜಮಾನ

ಏ

ಏನಾನುಂ = ಏನಾದರೂ
ಏವಯಿಸು = ಕಳವಳಿಸು; ದುಃಖವನ್ನು ಹೊಂದು

ಒ

ಒಡಂಬಡ = ಒಪ್ಪಿಗೆ; ಮೆಚ್ಚಿಗೆ

ಒಡ್ಡಿದ = ವ್ಯೂಹವಾಗಿ ನಿಂತ; ಎದುರಾಗಿಸಿದ

ಓ

ಓಪಳು = ಪ್ರೀತಿಯುಳ್ಳವಳು; ನಲ್ಲೆ

ಕ

ಕಣ್ಬಡಿಗರ್ = ವಂಚಕರು; ಮೋಸಗಾರರು

ಕದನತ್ರಿಣೇತ್ರ = (ಇಲ್ಲಿ) ಅರ್ಜುನ

ಕರಣ = ಆಯವ್ಯಯದ ಅಧಿಕಾರ; ಕೆಲಸ

ಕಾಲವೇದಿ = ತ್ರಿಕಾಲಗಳ ಜ್ಞಾನವುಳ್ಳವ

ಕಿರಾತ = ಬೇಡ; ಕಾಡಾಡಿ

ಕುಮಾರಸ್ವಾಮಿ = ಷಣ್ಮುಖ; ಸ್ಕಂದ

ಕುಂಭಜ = ದ್ರೋಣ

ಕೃತಾಂತ = ಯಮ

ಕೆಂದಿದ = ನಿದ್ದೆಹೋದ; ಮೂರ್ಛೆಹೊಂದಿದ

ಕೇತನ = ಧ್ವಜ

ಕೇರ್ = ಗೋಡೆ

ಕೈವಾರಿಸು = ನೆರವುಕೊಡು; ಸಹಕರಿಸು

ಗ

ಗುಣಣೆ = ನೃತ್ಯಶಾಲೆ

ಗುಣಾರ್ಣವ = ಅರ್ಜುನನ ವಿಶೇಷನಾಮ

ಗುಹ = ಷಣ್ಮುಖ

ಗುಹ್ಯಕ = ದೇವತೆಗಳಲ್ಲಿ ಒಂದು ಬಗೆ

ಗೊರವ = ತಪಸ್ವಿ; ಸಂನ್ಯಾಸಿ

ಗೊಡ್ಡ = ತೊಂದರೆ; ಕಪಟೋಪಾಯ

ಗೋಗ್ರಹಣ = ಆಕಳನ್ನು ಸೆರೆಹಿಡಿಯುವುದು

ಘ

ಘಟ್ಟಮಗುಳ್ಚು = ಗಂಧವನ್ನು ಅರೆ

ಘಟ್ಟವಳ್ತಿ = ಗಂಧಲೇಪನವನ್ನು ಮಾಡುವವಳು

ಚ

ಚತುರ್ಬಲ = ನಾಲ್ಕು ಬಗೆಯ ಸೈನ್ಯ; ಚತುರಂಗಬಲ

ಚಮ್ಮಟಿಗೆ = ಬಾರುಕೋಲು

ಚಲಂಬೆರಸು = ಹಟತೊಟ್ಟು

ಡ

ಡೊಕ್ಕರಿಸು = ಗುದ್ದು; ಏಟುಹಾಕು

ತ

ತನುತ್ರ = ಕವಚ

ತವಿಸು = ಸೊರಗಿಸು; ಕೊರಗಿಸು

ತುಡುವೆದ್ದು = ರಭಸದಿಂದ; ಹುರುಪಿನಿಂದ

ತೂಳಿ = ನೂಕಿ; ಮುಂದುವರೆಸಿ

ತೆಗಲೆ = ಹೆಗಲು

ತೊದಳ್ನುಡಿ = ತಪ್ಪಾಗಿ ಮಾತಾಡು

ತೊರೆ = (ಗಂಗಾ) ನದಿ

ತೊಂಡು = ಚಲ; ಹಟ

ತೋಯ = ನೀರು

ತೋಯಜಷಂಡ = ಕಮಲಾಕರ; ಸರೋವರ

ದ

ದಡಿಗ = ದೊಣ್ಣೆ ಹಿಡಿದವ; ಟೊಣ್ಯಾ

ದಾಡೆ = ಕೋರೆಹಲ್ಲು

ದಿಗಿಭ = ದಿಗ್ಗಜ; ದಿಕ್ಕುಗಳಲ್ಲಿರುವ ಆನೆ

ದಿವ್ಯಂ = ದೈವೀಶಕ್ತಿ; ಸ್ವರ್ಗ ಲೋಕ ಸಂಬಂಧಿ

ದೋರ್ವಲ = ಬಾಹುಬಲ

ಧ

ಧ್ವಜಿನಿ = ಸೈನ್ಯ

ನ

ನಗ = ಪರ್ವತ

ನದೀಜ = ಭೀಷ್ಮ

ನರೇಂದ್ರುತಾಪಸ = ಅರ್ಜುನ

ನಿಮ್ಮಡಿ = (ಸನ್ಮಾನಾರ್ಥಕ ಮಾತು) ತಾವು; ಸನ್ನಿಧಿ

ನೊಸಲು = ಹಣೆ

ಪ

ಪಚ್ಚುಂ = ಹಂಚು

ಪಡೆಮೆಚ್ಚಿಗಂಡ = ಸೈನ್ಯಕ್ಕೆ ಪ್ರಿಯನಾದ ವೀರ; ಅರ್ಜುನ

ಪರಾಕ್ರಮಧವಳ = (ಇಲ್ಲಿ) ಅರ್ಜುನ

ಪರಿಸರದ = ಸುತ್ತುಮುತ್ತಣ

ಪಸುಂಬೆ = ಹಸುಬೆ (ಚೀಲ)

ಪಸೆ = ಆರ್ದ್ರತೆ

ಪಾರ್ದು = ದಿಟ್ಟಿಸಿನೋಡಿ

ಪಿರಿತಿನಿ = ದೆವ್ವ

ಪುಯ್ಯಲ್ = ಗಲಾಟೆ, ಗದ್ದಲ; ಗೋಳು

ಪುರಂದರ = ಇಂದ್ರ

ಪುಳಿಂದಿ = ಬೇಡರವಳು

ಪೆಣೆ = ಜೊತೆಗೂಡು; ಯುದ್ಧ ಮಾಡು

ಪ್ರೇತಪುರಿ = ಯಮನ ಪಟ್ಟಣ

ಪೊಚ್ಚರಿಸು = ಉತ್ಸಾಹದಿಂದೇಳು; ಹೆಮ್ಮೆಪಡು

ಪೊಡರ್ಪು = ಸತ್ತ್ವ; ತೇಜಸ್ಸು

ಫ

ಫಣಿಕೇತನ = ದುರ್ಯೋಧನ

ಬ

ಬರ = ವರ

ಬಾಹಪ್ಪಳಿಸು = ಸದ್ದುಹೊಡೆ

ಬಿನ್ನಾಣ = (ವಿಜ್ಞಾನ) ಪಾಂಡಿತ್ಯ

ಬೃಹಂದಳೆ = ನಪುಂಸಕ

ಬೆನ್ನೀರಂ = ಬಿಸಿನೀರನ್ನು

ಬೆಸಕೆಯ್ = ಸೇವೆಮಾಡು; ಆಜ್ಞೆಪಾಲಿಸು

ಬೆಸನ = ಆಜ್ಞೆ; ಅಪ್ಪಣೆ

ಬೆಳ್ಪ = ಗಾವಿಲ; ಹುಂಬ

ಬೆಳ್ಪಡಿಯ = ಶಿವ

ಬೇಳ್ವೆ = ಯಜ್ಞ

ಬೇಳಂಬ = ಆಶ್ಚರ್ಯ; ಮುಗ್ಧತೆ

ಬೇಳ್ದು = ಆಹುತಿಯಿಕ್ಕಿ; ಹೋಮಿಸಿ

ಬೋನವೇಳಿಗೆ = ಅಡುಗೆಯ ಉಪಕರಣದ ಪೆಟ್ಟಿಗೆ

ಭ

ಭೂತಾಧಿಪತಿ = ಶಿವ

ಮ

ಮಚ್ಚು = ಒಲವು; ಪ್ರೀತಿ
ಮತ್ತಿನ = ಉಳಿದ; ಬೇರೆಯ
ಮನುಜಮಾಂಧಾತ = (ಇಲ್ಲಿ) ಅರ್ಜುನ
ಮದಾಂಧಗಂಧಸಿಂಧುರ = ಸೊಕ್ಕಿನಿಂದ ಕುರುಡಾದ ಮದದಾನೆ
ಮನೋಜ = ಕಾಮ
ಮಣೆಗೊಂಡಂ = ಪೀಠದ ಮೇಲೆ ಕುಳಿತನು
ಮಯೂಖ = ಕಿರಣ
ಮರಸಿದ = ಅಡಗಿಸಿದ; ಮುಚ್ಚಿದ
ಮರಕೆಂದು = ಮೂರ್ಛೆಹೋಗು
ಮಾಸಾದಿ = ಅಶ್ವಶಾಲಾಧಿಕಾರಿ; ಶ್ರೇಷ್ಠರಾವುತ
ಮುರಾಂತಕ = ಶ್ರೀಕೃಷ್ಣ
ಮೂಗಳ್ಕೆ = ಮೂಗಿನುಸಿರಲ್ಲಿಯೇ ಅಳುವುದು; ಮೌನದುಃಖ
ಮೂರಿಬಿಡು = ಒಡೆದು ಇಬ್ಭಾಗವಾಗು; ಭೂಕಂಪವಾಗು
ಮೃಗಯಾನಿಧಾನ = ಬೇಟೆಯ ಪ್ರದೇಶ
ಮೆಳ್ಪಡೆ = ಮೋಸಹೋಗುವಂತೆ
ಮೋದು = ಹೊಡೆ; ಯುದ್ಧಮಾಡು
ಮಂತರಿಸು = ಆಲೋಚಿಸು

ಲ

ಲತಾಲಲಿತೆ = ಬಳ್ಳಿಯಂತೆ ಮೃದುವಾಗಿರುವಳು

ವ

ವಿದ್ವಿಷ್ಟವಿದ್ರಾವಣ = ವೈರಿಗಳನ್ನು ಕರಗಿಸಿಬಿಡುವವನು (ಅರ್ಜುನ)
ವೃಕೋದರ = ಭೀಮಸೇನ
ವೃಷಾಂಕ = ಶಿವ

ಶ

ಶಮೀದ್ರುಮ = ಬನ್ನಿಯಮರ
ಶಿಖಿ = ಅಗ್ನಿ
ಶೈಳ = ಪರ್ವತ

ಸ

ಸನ್ನೆ = ಸಂಕೇತ; ಗುರುತು
ಸಮಕಟ್ಟು = ಏರ್ಪಾಡು; ಕಾರ್ಯಕ್ರಮ
ಸರಳು = ಬಾಣ
ಸಟ್ಟುಗ = ಸೌಟು
ಸಾರ್ಚು = ಹೊಂದಿಸಿ ಇಡು
ಸಾಹಸಾಭರಣ = (ಇಲ್ಲಿ) ಅರ್ಜುನ
ಸಾಹಸಾಂಕ = ಅರ್ಜುನ
ಸಿಕ್ತ = ತೊಯಿದ; ನನೆದ
ಸೆರಗು = ಭಯ; ಹೆದರಿಕೆ
ಸೈರಂಧ್ರಿ = ರಾಣಿಯರ ಅಲಂಕಾರಕ್ಕೆ ನೆರವಾಗುವ ದಾಸಿ
ಸೌಳಗೆ = ಅನುಕರಣವಾಚಕ; ಸಳ್ಳೆಂದು

ಹ

ಹೊದಳು = ಅರಳು
ಹೋರ್ಕಳ = ರಣಭೂಮಿ

---

## ೨. ಮುದ್ರಾಮಂಜೂಷ

**ಅ**

ಅಂಗುಳೀಯಕ = ಉಂಗುರ
ಅಂತರ್ಗೃಹ = ಒಳಮನೆ
ಅರ್ಥಾರ್ಥಿ = ಹಣವನ್ನು ಅಪೇಕ್ಷಿಸುವವ
ಅನೃತ = ಹುಸಿ, ಸುಳ್ಳು
ಅನ್ಯತ್ರ = ಬೇರೆಡೆಗೆ
ಅನ್ಯಾದೃಶ = ಬೇರೆಯವರಲ್ಲಿ ಕಾಣದಂತಹುದು
ಅರ್ಭಕ = ಹುಡುಗ

**ಉ**

ಉದ್ಘಾಟಿಸು = ಕೂಗಿ ಹೇಳು, ಸಾರು
ಉಪಾಧಿ = ಮನಸ್ಥಿತಿ, ತೊಂದರೆ

**ಎ**

ಎಳಗಂದಿ = ಹೊಸದಾಗಿ ಈದ ಆಕಳು

**ಕ**

ಕಂಕಣರವ = ಬಳೆಗಳ ಸದ್ದು
ಕೃತಸಂಕೇತರು = ಹೊಂಚು ಹಾಕಿದವರು
ಕುಸುಮಪುರ = ಪಾಟಲೀಪುರ

**ಗ**

ಗೂಢಪುರುಷ = ಬೇಹುಕಾರ, ಗುಪ್ತಚಾರ

**ಚ**

ಚಮೂಪತಿ = ಸೇನಾಪತಿ, ದಳವಾಯಿ

**ಛ**

ಛದ್ಮನೆ = ರಹಸ್ಯ, ಗೌಪ್ಯ, ವಂಚನೆ

**ಜ**

ಜನೇಶ್ವರ = ಅರಸು, ದೊರೆ
ಜೀತ = ವೇತನ, ಸಂಬಳ

**ತ**

ತದನುಗುಣ = ಅದಕ್ಕೆ ಯೋಗ್ಯವೆನಿಸುವ

**ದ**

ದಾಪಿನಾನೆ = ಬೇಟೆಗಾಗಿ ಪಳಗಿಸಿದ ಆನೆ
ದಾರಾ = ಹೆಂಡತಿ

**ಧ**

ಧ್ವಜಿನಿ = ಸೈನ್ಯ
ಧೌತಾಂಬರ = ಮಡಿಮಾಡಿದ ಬಟ್ಟೆ, ಒಗೆದ ಬಟ್ಟೆ

**ನ**

ನಿಗದಿಗೈಯದೆ = ನಿರ್ಧರಿಸದೆ, ಗೊತ್ತುಮಾಡದೆ
ನಿಯಾಮಕ = ಆಳುವವನು
ನಿರುಪಾಧಿಕ = ತೊಡಕಿಲ್ಲದುದು
ನಿರ್ವಾಹಾನುಗುಣ್ಯ = ನೀಗಿಸುವ ಶಕ್ತಿಗೆ ತಕ್ಕುದಾದ

**ಪ**

ಪ್ರಕೃತ = ಪ್ರಸಂಗ, ಸಂದರ್ಭ
ಪ್ರಕೃತೋಚಿತ = ಸಮಯಕ್ಕೆ ಸರಿಯಾದ

Funding: Tattva Heritage Foundation,Kolkata. Digitization: eGangotri.



ಪ್ರಚ್ಛನ್ನ = ಗುಪ್ತ, ಅಡಗಿದ
ಪರಾಪೇಕ್ಷೆ = ಬೇರೆಯವರ ಅವಲಂಬನೆ
ಪರ್ಯವಸಾನ = ಕಾರ್ಯದ ಕೊನೆಯ ಸಮಯ, ಅಂತ್ಯಕಾಲ
ಪ್ರತಿಲೋಮ = ವಿರುದ್ಧ ರೀತಿ
ಪೃತನಾ = ಸೈನ್ಯಭಾಗ
ಪ್ರಸವಸಮಯ = ಹೆರಿಗೆಯಕಾಲ
ಪ್ರಸ್ಥಾನ = ಪ್ರಯಾಣದ ಸಿದ್ಧತೆ
ಪ್ರಾಕಾರ = ಸುತ್ತುಗೋಡೆ
ಪ್ರಾಧಾನ್ಯಶಸ್ತ್ರ = ಮುಖ್ಯ ಮಂತ್ರಿಯ ದಂಡ

ಫ

ಫೌಜು = ಸೈನ್ಯವಿಭಾಗ

ಭ

ಭಗ್ನ = ಒಡೆದ, ಮುರಿದ, ಹಾಳಾದ

ಮ

ಮುಂಡನ = ಅಲಂಕಾರ, ತೊಡುಗೆ
ಮರಾಳ = ಹಂಸ
ಮುಕುಳಿತಹಸ್ತ = ಮುಗಿದ ಕೈ
ಮುಖಾಸಿಗ್ರಾಮ = ಉಂಬಳಿಯ ಹಳ್ಳಿ
ಮೂಲೋತ್ಪಾಟನ = ಬೇರುವೆರಸಿ ಕೀಳುವುದು
ಮೋಹರ = ಸುವರ್ಣನಾಣ್ಯ, ಹೊನ್ನು, ಮುದ್ರಿಕೆ
ಮೌಲ್ಯ = ಬೆಲೆ, ಕ್ರಯ

ರ

ರಾಜೀಕ = ಕ್ರಾಂತಿ, ದೊಂಬೆ
ರಾಯಸದವ = ಓಲೆಗಳನ್ನು ಬರೆಯುವ ಅಧಿಕಾರಿ

ವ

ವಣಿಜ = ವ್ಯಾಪಾರಿ, ವರ್ತಕ
ವಧ್ಯಸ್ಥಾನ = ಕೊಲೆಮಾಡುವ ಸ್ಥಳ
ವ್ಯಾಜಾಂತರ = ಬೇರೆ ಕಾರಣಕ್ಕಾಗಿ
ವಾಹಿನಿ = ಸೈನ್ಯ, ನದಿ
ವಿತರಣಶಾಲಿ = ದಾನಿ, ಕೊಡಗೈಯವ
ವಿಪನ್ನ = ಕಷ್ಟಕ್ಕೆ ಸಿಕ್ಕಿದವ

ಸ

ಸಂಪುಟ = ಕರಡಿಗೆ
ಸುಕೃತಿ = ಪುಣ್ಯಶಾಲಿ
ಸೂತಿಕಾಗೃಹ = ಹೆರಿಗೆಯ ಮನೆ

ಕ್ಷ

ಕ್ಷಯಸೂತಕ = ಸತ್ತವರಿಗಾಗಿ ಬಂದ ಮೈಲಿಗೆ

Funding: Tattva Heritage Foundation,Kolkata. Digitization: eGangotri.



## ಪದ್ಯಭಾಗ

## ೧. ಹರಿಶ್ಚಂದ್ರ ಕಾವ್ಯ

ಅ

ಅಘಹರ = ಪಾಪವನ್ನು ನಾಶಮಾಡುವಂತಹದು

ಅಡವು = ಒತ್ತೆಯಿಡುವಂತಹ ವಸ್ತು

ಅಡಿಸು = ಹಬ್ಬು; ವ್ಯಾಪಿಸು

ಅನಲ = ಬೆಂಕಿ

ಅನೃತ = ಅಸತ್ಯ; ಸುಳ್ಳು

ಅಪಕರ್ಷಣೆ = ದೂರಮಾಡುವವಳು

ಅಭ್ಯಾಸದವರು = ಪರಿಚಿತರು; ಸ್ನೇಹಿತರು

ಅರುಪು = ತಿಳುಹು

ಅಲ್ಲಿಂಬಳಿಕ = ತರುವಾಯ; ಆಮೇಲೆ

ಅವಗಾಹ = ಸ್ನಾನ

ಅಳುಕು = ಅಂಜು; ಬೆದರು

ಆ

ಆರುವಂ = ಯಾರನ್ನೂ

ಇ

ಇಡುಕುರು = ಅವಕಾಶ; ಸಂದು

ಉ

ಉತ್ತರಿಸು = ದಾಟು; ಬೇರೆ ತೀರ ವನ್ನು ಹೊಂದು

ಉಮ್ಮಳಿಸು = ಚಿಂತಿಸು; ಕಳವಳಿಸು

ಉರವಣಿಸಿ = ವೇಗವಾಗಿ

ಊ

ಊಡು = ಉಣ್ಣು; ಉಣಿಸು

ಎ

ಎಳಸು = ಇಚ್ಛಿಸು

ಒ

ಒಪ್ಪು = ಕಾಂತಿ

ಓ

ಓಲಾಡು = ಈಜಾಡು

ಕ

ಕಡಗಿ = ಕೆರಳಿ; ರೇಗಿ

ಕಮಲಜ = ಬ್ರಹ್ಮ

ಕರಿಕುವರಿಸು = ಸುಟ್ಟು ಕಮರಿಸು

ಕಲಿಮಲ = ಕಲಿಯುಗದ ಪಾಪ

ಕಳಿ = ದಾಟು

ಕಾಂತಾರ = ಅರಣ್ಯ

ಕಾದೆಲರು = ಬಿಸಿಯಾದ ಗಾಳಿ

ಕುಡಿತೆ = ಬೊಗಸೆ

ಕುತ್ತುರು = ಹೊದರು; ಗುಂಪು

ಕುಧರ = ಬೆಟ್ಟ; ಪರ್ವತ

ಕುಲಿಶ = ವಜ್ರ; ಇಂದ್ರನ ಆಯುಧ

ಕೃತಕಾಗ್ನಿ = ಮಾಟದ ಬೆಂಕಿ

ಕೈಸಾರು = ಸ್ವಾಧೀನವಾಗು; ಕೈಗೆಬರು

ಗ

ಗಡಿಗೆಟ್ಟ = ಮೇರೆಇಲ್ಲದ; ಲೆಕ್ಕಕ್ಕೆ ಬಾರದ

ಚ

ಚಮೂಪತಿ = ಸೇನಾಪತಿ; ದಂಡನಾಯಕ

ಜ

ಜಲಜವನ = ತಾವರೆಯತೋಟ

ದ

ದಳ್ಳುರಿ = ಬೇಗೆ; ದೊಡ್ಡ ಉರಿ

Funding: Tattva Heritage Foundation,Kolkata. Digitization: eGangotri.



ದಕ್ಷಿಣಾರ್ಥ = ದಾನದೊಂದಿಗೆ ಕೊಡುವದ್ರವ್ಯ
ದಾವಾಗ್ನಿ = ಕಾಳ್ಗಿಚ್ಚು

**ಧ**

ಧಾವತಿ = ದಣಿವು; ಬಳಲಿಕೆ
ಧ್ವಾನ = ಸಪ್ಪಳ
ಧೀರ = ಧೈರ್ಯಶಾಲಿ; ಸಾಹಸಿ

**ನ**

ನಡೆಗೆಡು = ನಡೆಯಲಾರದೆ ನಿಂತುಕೊಳ್ಳು
ನಿಜಾಂಗನೆ = ತನ್ನಹೆಂಡತಿ (ಚಂದ್ರಮತಿ)
ನಿತ್ಯ = ಚಿರಜೀವಿ; ಶಾಶ್ವತ
ನಿರೋಧ = ನಿರ್ಬಂಧ; ತಡೆ

**ಪ**

ಪುಣ್ಯೌಘ = (ಪುಣ್ಯ+ಓಘ) = ಪುಣ್ಯದ ಪ್ರವಾಹ

**ಬ**

ಬಲಗೊಂಬ = ಪ್ರದಕ್ಷಿಣೆ ಹಾಕುವ
ಬಳುಕು = ಕಂಪಿಸು; ನಡುಗು
ಬೊಬ್ಬೆಗೊಡು=ದುಃಖದಿಂದ ಕಿರುಚು
ಬೋಳೈಸು = ಮೈದಡಹು; ಸಮಾಧಾನಪಡಿಸು

**ಮ**

ಮಡಿದು = ಮಡಿಸಿ; ನಾಶವಾಗಿ
ಮದ್ದು = ಔಷಧಿ
ಮಾರಿ = ಮೃತ್ಯುದೇವತೆ
ಮುಗಿಲ = ಮೋಡದ
ಮುಟ್ಟಿಬಂದುದು = ಹತ್ತಿರ ಬಂದಿತು
ಮೂಗುವಡು = ಸುಮ್ಮಗಿರು; ಮೌನಿಯಾಗು
ಮೂರುಕರಣ = ಮೈ, ಮನಸ್ಸು, ಮಾತು ಈ ಮೂರು ಇಂದ್ರಿಯಗಳು
ಮೆಯ್ಯಿಕ್ಕು = ನಮಸ್ಕರಿಸು
ಮೊಳೆ = ಅಂಕುರಿಸು, ಹುಟ್ಟು
ಮಂದೈಪ = ಒಟ್ಟುಗೂಡುವ

**ಲ**

ಲಲ್ಲೆಗರೆ = ಪ್ರೀತಿಸು; ಪ್ರೇಮಿಸು
ಲೆಕ್ಕಿಸು=ಲಕ್ಷಿಸು; ನೋಡು; ಭಾವಿಸು
ವಸುಧೇಶ = (ವಸುಧಾ+ಈಶ) ಭೂಪತಿ; ರಾಜ
ವೃಷಧ್ವಜ=ಬಸವನ ಅಂಕಿತದ ಗುಡಿ

**ಶ**

ಶಶಿಮೌಳಿ = ಶಿವ; ವಿರೂಪಾಕ್ಷ
ಶುಚಿತನ = ಶುದ್ಧತೆ; ಪಾವಿತ್ರ್ಯ

**ಸ**

ಸುಕ್ಕಿ = ಒಣಗಿ
ಸುಗಿದು = ಬೆದರಿ
ಸುಧಾಪಿಂಡ = ಅಮೃತದ ತುತ್ತು
ಸೂಡಿ = ತಲೆಯಲ್ಲಿ ಮುಡಿದು

**ಹ**

ಹಾರದ = ಬಯಸದ; ಆಶಿಸದ
ಹೋಹಡೆ = ಹೋಗುವುದಾದರೆ

**ಕ್ಷ**

ಕ್ಷುತ್ಪಿಪಾಸೆ = ಹಸಿವು; ಬಾಯಾರಿಕೆ

## ೨. ಸೌಭರಿಮುನಿಯ ಸಂದರ್ಶನ

ಅ

ಅತಿಕ್ರಮಿಸು = ದಾಟು
ಅನುಪಮಿತ = ಹೋಲಿಕೆ ಇಲ್ಲದ; ಸರಿಯಿಲ್ಲದ
ಅವನಿಯಮರರ್ = ಭೂಸುರರು; ಬ್ರಾಹ್ಮಣರು
ಅರೆ = ಬಂಡೆ; ದೊಡ್ಡಕಲ್ಲು
ಅಳ್ಕೈ = ಪಕ್ಕೆ; ಪಕ್ಕಡೆ
ಅಳ್ತಿ = ಪ್ರೀತಿ; ಆದರ
ಅಂತರಿಸದೆ = ಹೆಚ್ಚುಕಡಿಮೆ ಮಾಡದೆ; ಬಿಡದೆ
ಅಂಬುಜಾಸನ = ಬ್ರಹ್ಮದೇವ

ಆ

ಆಖ್ಯ = ಹೆಸರುಳ್ಳ; ಕರೆಯಿಸಿಕೊಳ್ಳುವ
ಆಜ್ಯ = ತುಪ್ಪ

ಉ

ಉದ್ದಂಡ = ಹೆಮ್ಮೆ; ಸೊಕ್ಕು

ಒ

ಒದರಿಕೊಳುತ = ಮೈಯನ್ನು ಸಾವರಿಸಿಕೊಳ್ಳುತ್ತ; ಜಾಡಿಸಿಕೊಳ್ಳುತ್ತ
ಒದೆಯಕುಟ್ಟು = ಹಿಂಡುವಾಗ ಹಸುವಿನ ಹಿಂಗಾಲನ್ನು ಬಿಗಿದುಕಟ್ಟುವ ರೀತಿ; ಹಳಿ
ಒಬ್ಬುಳಿ = ಗುಂಪು; ಪುಂಜ

ಕ

ಕುತುಪಕಾಲ = ಶ್ರಾದ್ಧಮಾಡಲು ತಕ್ಕುದಾದ ಸಮಯ
ಕುಶ = ದರ್ಭೆ
ಕೃತಾಂತಕ = ಯಮಧರ್ಮ
ಕ್ರತು = ಯಜ್ಞ

ಗ

ಗರ್ದಭ = ಕತ್ತೆ
ಗುಡ = ಬೆಲ್ಲ

ಘ

ಘೋಷ = ಸದ್ದು; ಸಪ್ಪುಳ

ಚ

ಚಂಡಿಪೋರೆ = ಹಟದಿಂದ ಜಗಳವಾಡಲು

ಛ

ಛಲ = ಹಟಮಾರಿ

ತ

ತರಳತೆ = ಚಾಂಚಲ್ಯ; ಹುಡುಗಾಟ
ತಳ್ಳಿ = ತಂಟೆ; ಹಿಂಸೆ
ತೊಂಡುತೊಳಸು = ವಿಪರೀತ ಮನಸ್ಥಿತಿ; ಹಟವಾದಿತನ

ದ

ದಧಿ = ಮೊಸರು

ನ

ನರ = ಅರ್ಜುನ
ನವೋದನ = ಬಿಸಿ ಅನ್ನ

ನಿರೂಪ = ಅಪ್ಪಣೆ

**ಪ**

ಪಯ = ಹಾಲು
ಪರ್ಣ = ಎಲೆ
ಪಾಕ = ಅಡಿಗೆ
ಪರಿಚರ್ಯೆ = ಸೇವೆ
ಪಾವಕ = ಅಗ್ನಿ
ಪ್ರಾಕೃತರು = ಸಾಮಾನ್ಯರು; ಗಾವಿಲರು
ಪೂರ್ವಾಪರ = ಹಿಂದೆನಡೆದ ಸಂಗತಿ
ಪೈತೃಕ = ಪಿತೃಗಳಿಗೆ ಸಂಬಂಧಿಸಿದ ವಿಧಿ; ಶ್ರಾದ್ಧ

**ಫ**

ಫಣಿತಲ್ಪ = ಹಾವಿನಹಾಸಿಗೆಯುಳ್ಳವ; ವಿಷ್ಣು

**ಭ**

ಭೀಷಣ = ಭಯಂಕರ

**ಮ**

ಮನೆವಾಳ್ತೆ = ಮನೆಯ ಕೆಲಸ
ಮೂಲ = ಗಡ್ಡೆ; ಗೆಣಸು
ಮೃಡ = ಶಿವ
ಮೋಕ್ಷ = ಬಿಡುಗಡೆ

**ರ**

ರಜ = ರಜೋಗುಣ; ಧೂಳಿ
ರಾಕ್ಷಸಾರಿ = ಶ್ರೀಕೃಷ್ಣ

**ವ**

ವಹಿಲ = ತೀವ್ರ; ವೇಗ
ವಾಜಿ = ಕುದುರೆ
ವಾಜಿಮೇಧ = ಅಶ್ವಮೇಧ
ವ್ರೀಹಿ = ನೆಲ್ಲು; ಅಕ್ಕಿ
ವಾಹಿನಿ = ಸೈನ್ಯದ ಒಂದುಭಾಗ

**ಶ**

ಶಾಕ = ಪಲ್ಲೆಯ
ಶಾಲ್ಮಲಿ = ಬೂರಲಮರ
ಶಾಲಿಧಾನ್ಯ = ಒಳ್ಳೆಯ ಸಣ್ಣ ಭತ್ತ

**ಸ**

ಸಕುತ್ಸಿತ = ಕೊಳೆಗೂಡಿದುದು; ಮಲಿನವಾದುದು
ಸಹಸ್ರಾಕ್ಷ = ದೇವೇಂದ್ರ
ಸಾನ್ನಿಧ್ಯ = ಸಮೀಪತೆ
ಸುರಭೂಜ = ಕಲ್ಪವೃಕ್ಷ
ಸ್ವಾದುಫಲ = ಸವಿಯಾದ ಹಣ್ಣು

**ಹ**

ಹರಿ = ಶ್ರೀಕೃಷ್ಣ; ಕುದುರೆ
ಹರಿಯಹೋರು = ಕೊನೆಯ ವರೆಗೂ ಜಗಳಾಡು

## ೩. ಕಲ್ಯಾಣಪಟ್ಟಣದ ಪರಿಸರ

ಅ

ಅರೆ = ಕಲ್ಲ ಬಂಡೆ

ಅಂಚೆಕೊಂಚೆ = ಹಂಸ,ಕ್ರೌಂಚಪಕ್ಷಿ

ಅಂಭಾರವ = ಹಸುಗಳಕೂಗು

ಇ

ಇಂದುಗ್ರಾವ = ಚಂದ್ರಕಾಂತಶಿಲೆ

ಏ

ಏಳಿದಂಗೆಯ್ = ತಿರಸ್ಕರಿಸು; ಬೀಳುಗಳೆ

ಕ

ಕದಳ = ಬಾಳೆ

ಕಡಂಬ = ತಾಳೆಯಮರ

ಕರ್ದುಂಕು = ಕುಕ್ಕು; ಕಚ್ಚು

ಕಂತು = ಕಾಮ; ಮನ್ಮಥ

ಕಂತುಸಂಜೀವನ = ಕಾಮನಿಗೆ ಜೀವ ತುಂಬುವಂತಹದು

ಕಾದಲರ್ = ಪ್ರಣಯಿಗಳು; ನಲ್ಲರು

ಕಾಲ್ = ಕಾಲುವೆ

ಕಿಸಲಯ = ತಳಿರು; ಚಿಗುರು

ಕಿಸುವಣ್ = ಕೆಂಪುಬಣ್ಣದ ಹಣ್ಣು

ಕೀರಾಳಿ = ಗಿಳಿಗಳ ಗುಂಪು

ಕೇಕಿ = ನವಿಲು

ಕೋಕ = ಕಮಲದ ನಾಳ

ಕೋದಂಡ = ಬಿಲ್ಲು

ಕೌಂಗು = ಅಡಕೆಯ ಮರ

ಖ

ಖರ್ವಡ = ದೊಡ್ಡದಾದ ಊರು

ಖೇಡ = ಹಳ್ಳಿ

ಗ

ಗವಾಸ್ಪದ = ಹಸುಗಳ ಹಟ್ಟಿ

ಗೇಯ = ಸಂಗೀತ; ಹಾಡು

ಗೋಪಾರವ = ಗೊಲ್ಲರ ಕೂಗು

ಘ

ಘೃತಪೂರಿತ = ತುಪ್ಪದಿಂದ ತುಂಬಿದ

ಘನವಿಭವ = ಬಹಳ ಐಶ್ವರ್ಯ; ಮೋಡಗಳ ಗುಂಪು

ಚ

ಚಕ್ರ = ಚಕ್ರವಾಕಪಕ್ಷಿ; ಜಕ್ಕವಕ್ಕಿ

ಚೂತ = ಮಾವು

ಜ

ಜಡಿ = ತುಂಬು

ಜಂಬೀರ = ಲಿಂಬೆಯಗಿಡ

ಜಾಣ್ಗಾಡಿವಡೆ = ಜಾಣ್ಮೆ; ಚೆಲುವುಗಳನ್ನು ಹೊಂದು

ಜೋಡು = ಕವಚ; ಅಂಗರಕ್ಷೆ

ಡ

ಡುರುಕಾರವ = ಹೋರಿಗಳ ಕೂಗಿನ ಧ್ವನಿ

ತ

ತಕ್ರ = ಮಜ್ಜಿಗೆ

ತಳಿರ್ವನೆ = ಚಿಗುರೆಲೆಗಳಿಂದ ಮಾಡಿದ ಮನೆ

ತಿಂತಿಣಿ = ಸಮೂಹ

ದ

ದೇವಮಾತೃಕ = ಮಳೆಯಿಂದ ಬೆಳೆಬರುವ

ದ್ರೋಣಾಮುಖ = ಕಡಲದಂಡೆಯ ಪಟ್ಟಣ

ಧ

ಧನದ = ಕುಬೇರ; ಉತ್ತ ದಿಕ್ಕಿನ ಅಧಿಪತಿ

ಧರ = ಬೆಟ್ಟ

ನ

ನಾರಂಗ = ಕಿತ್ತಳೆ; ಸಂತ್ರಿ

ನದೀಮಾತೃಕ = ನದಿಯ ನೀರುಂಡು ಬೆಳೆಯುವ

ನಿಗಮ = ಪಟ್ಟಣ

ಪ

ಪಚ್ಚಡಿ = ಹಸಿಸೊಪ್ಪಿನಿಂದ ಮಾಡಿದ ಪದಾರ್ಥ

ಪದ್ಮರಾಗ = ಕೆಂಪುಬಣ್ಣದ ರತ್ನ

ಪನಸ = ಹಲಸು

ಪರಪುಟ್ಟ = ಕೋಗಿಲೆ

ಪರಮೆ = ತುಂಬಿ

ಪವನಪದ = ಆಕಾಶ

ಪ್ರಸವೋತ್ಸವ = ಹೆರಿಗೆಯ ಹಬ್ಬ

ಪಾಮರಿ = ಹಳ್ಳಿಯ ಹೆಣ್ಣು

ಪಾಳಿ = ಗದ್ದೆಯ ಹಾಳಿ

ಪಾಂಥ = ಹಾದಿಕಾರ

ಪುಳಿನ = ಉಸುಕು; ಮಳಲು

ಪೂಗ = ಅಡಕೆಯ ಮರ

ಪೊಂಗಳು = ಹೊನ್ನುಗಳು; ಸಂಪತ್ತು

ಬ

ಬೀಡೆವಣ್ = ಬಾಯಿಬಿಟ್ಟ ಹಣ್ಣು; ದಾಳಿಂಬ

ಭ

ಭೂಜ = ಗಿಡ; ಮರ

ಮ

ಮರಕತ = ಹಸುರುರತ್ನ; ಪಚ್ಚೆ

ಮರೀಚಿ = ಕಿರಣ

ಮಹತ್ತು = ಘನತೆ; ದೊಡ್ಡಿತೆ

ಮಂಥಾನ = ಕಡಗೋಲು

ವ

ವಸನ = ವಸ್ತ್ರ

ಶ

ಶಾಳಿ = ನೆಲ್ಲುಗುದ್ದೆ

ಶೃಂಗ = ಕೋಡು; ಕೊಂಬು

ಲ

ಲಾಸ್ಯಭವನ = ನರ್ತನ ಶಾಲೆ

ಲಿಂಗಭವ = ಕಾಮ; ಮದನ

ಸ

ಸತ್ರ = ಅನ್ನವನ್ನಿಕ್ಕುವ ಮನೆ, ಧರ್ಮಶಾಲೆ

ಸರಂ = ಸರೋವರ; ಕೊಳ

ಸಾರ್ವಕಾಲಂ = ಯಾವಾಗಲೂ

ಸುತೃತ = ಪುಣ್ಯ

ಸುರವನ = ಖಾಂಡವವನ

ಸೂಪ = ಸಾರು, ಹುಳಿ

ಸೋಗೆವಸರು = ಕಬ್ಬಿನಗರಿಯ ಹಸುರು

ಸೋವ = ಬೆದರಿಸುವ; ಅಟ್ಟುವ

ಸೌಧ = ಬಿಳಿಯ ಬಣ್ಣದ ಉಪ್ಪರಿಗೆ

## ೪. ಸುಧರ್ಮರಾಜನ ಕಥೆ

ಅ

ಅನೇಕವಾಕ್ಯ ಪ್ರತಿಷ್ಠಾಚಾರ್ಯ = ಹಲವು ಮಾತುಗಳಿಂದ ಹೊಗಳಿಸಿಕೊಳ್ಳುವವನು

ಅರ್ಥವರು = ಅರ್ಥಜನರು

ಅರಗುಲಿ = ಧರ್ಮಹೀನ; ಅಧರ್ಮಿ

ಅಷ್ಟಾದಶ = ಹದಿನೆಂಟು

ಆ

ಆರಡಿಕಾರ = ದೊಂಬೆಗಾರ; ತುಂಟ

ಎ

ಎಣ್ಬರು = ಎಂಟು ಜನರು

ಎದೆಹಾರುತನ = ಬೆದರಿಕೆ; ಅಂಜಿಕೆ

ಒ

ಒಡಬಡು = ಒಪ್ಪಿಕೊಳ್ಳು; ಸಮ್ಮತಿಸು

ಓ

ಓಸರಿಸು = ಬದಿಗೆ ಸರಿಸು

ಕ

ಕೂರಸಿ = ಹದನಾದ ಕತ್ತಿ

ಕೊಕ್ಕರಿಸು = ಹೇಸು; ಹಿಂಜರಿ

ಕೋಟಲೆ = ದುಃಖ

ಗ

ಗೊಲ್ಲಸ = ಹೆಡ್ಡತನ; ಗಾವಿಲತನ

ಘ

ಘೋಷಣೆ = ಡಂಗುರ ಸಾರುವಿಕೆ

ಘೋಳಿಡು = 'ಘೋ' ಎಂದು ಶಬ್ದ ಮಾಡು

ಚ

ಚಾರ್ವಾಕ = ನಾಸ್ತಿಕಧರ್ಮ

ಛ

ಛಪ್ಪನ್ನ = ಐವತ್ತಾರು

ಜ

ಜನಪ = ಅರಸು

ನ

ನಿಜಸುದತಿ = ಹೆಂಡತಿ

ಪ

ಪಗೆವರ = ವೈರಿಗಳನ್ನು

ಪರಮಂಡಲ = ಬೇರೆ ರಾಜರ ಪ್ರದೇಶ

ಪರಿಜನ = ಆಪ್ತಜನರು

ಪರಿದು = ಓಡಿ

ಪಿಸುಣ = ಚಾಡಿಕೋರ

ಪುಗು = ಪ್ರವೇಶಿಸು

ಬ

ಬಿಸವಂದ = ವಿಸ್ಮಯ; ಅಚ್ಚರಿ

ಭ

ಭೌತಿಕ = ಪಂಚಭೂತಗಳಿಂದಾದ

ಮ

ಮಣಿದೊಡವು = ರತ್ನಾಲಂಕಾರ

ಮಹೀವರ = ಅರಸು; ರಾಜ

ಮಾಣವಕ = ಹುಡುಗ

ರ

ರಚನೆಯಿಂದ = ಚಾತುರ್ಯದಿಂದ

ರಾಣುವೆ = ರಾಜನ ಅಧೀನದ ಪ್ರದೇಶ; ರಾಜ್ಯ

**ಲ**

ಲಕ್ಕ = ಲಕ್ಷ

ಲಗ್ನ = ಒಂದು ರಾಶಿಯಿಂದ ಇನ್ನೊಂದು ರಾಶಿಗೆ ರವಿಯು ಹೋಗುವ ವರೆಗಿನ ಕಾಲಖಂಡ

**ವ.**

ವಿತ್ತ = ಧನ; ಸಂಪತ್ತು

**ಶ**

ಶಕಟ = ಚಕ್ಕಡಿ; ಬಂಡಿ

ಷಡ್ಭಾಗ = ಆರು ಪಾಲು

**ಸ**

ಸುರಗಿ = ಕಿರುಗತ್ತಿ

ಸಂದ = ಹೆಸರುವಾಸಿಯಾದ

**ಹ**

ಹದಿಕೆ = ವಂತಿಗೆ; ವರ್ಗಣಿ

ಹಬ್ಬುದಲೆ = ಕೆಳಗೆ ಮಾಡಿದ ತಲೆ

ಹರಕೆದೆಗೆ = ಹರಕೆಯನ್ನೊಪ್ಪಿಸು; ಕೊಲ್ಲು

ಹಸಗೆಯ್ = ಅಂದಗೊಳಿಸು; ಸ್ವಚ್ಛಮಾಡು

## ಅಭ್ಯಸನಗಳು

### ಗದ್ಯಭಾಗ

### ೧. ಸಮಸ್ತಭಾರತಸಾರ

೧ ಅರ್ಜುನನ ತಪೋವನ ಗಮನದ ಉದ್ದೇಶವನ್ನು ವಿವರಿಸಿ ಅದು ಈಡೇರಿದ ಬಗೆಯನ್ನು ನಿರೂಪಿಸಿರಿ.

೨ 'ಒಂದಬ್ದಮೊಳೆ ಬೃಹಂದಳೆಯಾಗು'—ಯಾರು ಬೃಹಂದಳೆ ಯಾಗಬೇಕಾಯಿತು ? ಅದಕ್ಕೆ ಕಾರಣಗಳನ್ನು ಕೊಡಿರಿ.

೩ ಮುದುಗೋಡುಗ ಮತ್ತು ಭೀಮ ಇವರ ಸಂದರ್ಶನವನ್ನು ಸಂಭಾಷಣೆಯ ರೂಪದಲ್ಲಿ ಬರೆಯಿರಿ.

೪ 'ಕನಕನ ಪ್ಯೆ ಕೀರ್ತನೆಯುದರದಲ್ಲಿ ಕರಗಿತು' ಈ ಮಾತಿಗೆ ಸಂಬಂಧಿಸಿದ ವೃತ್ತಾಂತವನ್ನು ತಿಳಿಯಪಡಿಸಿರಿ.

೫ ದ್ವೈತವನದಲ್ಲಿ ಧರ್ಮನಂದನನಿಗೆ ಎದುರಾದ ಧರ್ಮ ಸಂಕಟ ವನ್ನು ವಿವರಿಸಿರಿ.

೬ ವಿರಾಟರಾಯನ ನಾಟಕಶಾಲೆಯಲ್ಲಿ ನಡೆದ ಅಪೂರ್ವ ನಾಟಕದ ಸೊಗಸನ್ನು ನಿಮ್ಮ ಮಾತುಗಳಲ್ಲಿ ಬಣ್ಣಿಸಿರಿ.

೭ ಕಾಮಾಂಧನಾದ ಕೀಚಕನ ದುರವಸ್ಥೆಯನ್ನು ಕುರಿತು ವಿರಾಟ ನಗರದಲ್ಲಿ ಯಾವ ಬಗೆಯ ಕಳಕಳವುಂಟಾಯಿತು ? ವಿವರಿಸಿರಿ.

೮ 'ಗೋಗ್ರಹಣ ಮೋಕ್ಷದೊಡನೆ ಪಾಂಡವರಿಗೆ ಹಿಡಿದ ಗ್ರಹ ಣದ ಮೋಕ್ಷವೂ ಆಯಿತು' ಅದು ಹೇಗೆ ಎಂಬುದನ್ನು ತಿಳಿಯಪಡಿಸಿರಿ.

---

## ೨. ಮುದ್ರಾಮಂಜೂಷ

೧ ದೂತರನ್ನು ಕೈಯೊಳಗಿರಿಸಿಕೊಳ್ಳಲು ಚಾಣಕ್ಯನು ಯಾವ ಉಪಾಯವನ್ನು ಮಾಡುವನು, ಅದು ಸರಿಯಾದುದೆ? ಚರ್ಚಿಸಿರಿ.

೨ ಚಾಣಕ್ಯನು ಮಹಾ ಕಪಟಿ ಎಂದು ಮಲಯಕೇತುವು ಹೇಗೆ ತಿಳಿದುಕೊಳ್ಳುತ್ತಾನೆ?

೩ ಭದ್ರಭಟಾದಿಗಳನ್ನು ನೋಡಿ ರಾಕ್ಷಸನಲ್ಲಿ ಹುಟ್ಟಿಕೊಂಡ ವಿಚಾರಗಳಾವವು? ಅವರನ್ನು ತನ್ನ ಅಳವಿನಲ್ಲಿಟ್ಟುಕೊಳ್ಳಲು ಅವನು ಯಾವ ಹಂಚಿಕೆಯನ್ನು ಮಾಡಿದನು?

೪ ಚಾಣಕ್ಯನು ಅಮಾತ್ಯರಾಕ್ಷಸನ ದ್ವೇಷಿಯೆ? ಸಕಾರಣವಾಗಿ ತಿಳಿಸಿರಿ.

೫ ಮರಾಳನು ಯಾರು? ಅವನಿಂದ ಚಾಣಕ್ಯನಿಗೆ ಯಾವ ಸೇವೆ ಸಲ್ಲಿತು?

೬ ಚಂದನದಾಸನಲ್ಲಿ ಗೂಢಚಾರನಿಗೆ ಯಾವ ರಹಸ್ಯವು ತಿಳಿದು ಬಂದಿತು? ಅದನ್ನು ಅವನು ಹೇಗೆ ಗುರುತಿಸಿದನು?

೭ ರಾಕ್ಷಸನ ಮುದ್ರೆಯ ಉಂಗುರವನ್ನು ಪಡೆಯಲು ಚಾಣಕ್ಯನು ಯಾವ ಉಪಾಯವನ್ನು ಯೋಜಿಸಿದನು? ಯಾವ ಉದ್ದೇಶವಾಗಿ ಹೀಗೆ ಮಾಡಿದನು?

೮ ಚಂದ್ರಗುಪ್ತನಲ್ಲಿ ಅನುರಕ್ತರಲ್ಲದವರನ್ನು ಚಾಣಕ್ಯನು ಹೇಗೆ ತಿಳಿದುಕೊಂಡನು? ಅವರನ್ನು ಚಾಣಕ್ಯನು ಹೇಗೆ ನಡಿಸಿಕೊಳ್ಳುವನೆಂಬುದನ್ನು ವಿವರಿಸಿರಿ.

೯ ಚಾಣಕ್ಯ ಮತ್ತು ಚಂದನದಾಸ ಇವರ ಸಂಭಾಷಣೆಯನ್ನು ನಿಮ್ಮ ಶಬ್ದಗಳಲ್ಲಿ ಬರೆಯಿರಿ.

---

## ಏಕಾಂಕ ಭಾಗ

## ೧. ವೀರ ಪುಲಕೇಶಿ

೧ ವಿಜಯಾ ಮತ್ತು ಮಂಗಲೇಶರ ಸಂಭಾಷಣೆಯಿಂದ ತಿಳಿದು ಬರುವ ಅವರವರ ಸ್ವಭಾವಚಿತ್ರಣವನ್ನು ಕೊಡಿರಿ.

೨ ಮಂಗಲೇಶನ ಮನಸ್ಸನ್ನು ತಿರುಗಿಸಲು ವಿಜಯಾ ಯಾವ ಪ್ರಯತ್ನವನ್ನು ಮಾಡುತ್ತಾಳೆ? ಅದರ ಪರಿಣಾಮವೇನಾಯಿತು ? ವಿವರಿಸಿರಿ.

೩ ಮೋಹದ ಬಲೆಯಲ್ಲಿ ಸಿಲುಕಿದ ಮಂಗಲೇಶನು ಯಾವ ಕಾರ್ಯವನ್ನು ಮಾಡುತ್ತಾನೆ? ಅದು ನಿಮ್ಮ ಮನಸ್ಸಿಗೆ ಬರುವುದೇ ? ಕಾರಣಗಳನ್ನು ಕೊಡಿರಿ.

೪ ಮಂಗಲೇಶನೊಬ್ಬ ಧೂರ್ತ ಎಂಬುದನ್ನು ಹೇಗೆ ತಿಳಿಯುವಿರಿ ?

೫ ಚಿಕ್ಕಪ್ಪನ ಅಭಿಪ್ರಾಯವನ್ನು ತಿಳಿದುಕೊಳ್ಳುವುದಕ್ಕೆ ಪುಲಕೇಶಿಯು ಯಾವ ತಂತ್ರವನ್ನು ಹೂಡುವನು ?

೬ ಮಂಗಲೇಶನ ಮರಣದ ತರುವಾಯ ವಿಜಯಾ ತನ್ನ ಸ್ಥಿತಿಯನ್ನು ಕುರಿತು ಮಾಡುತ್ತಿರುವ ಆಲೋಚನೆಯನ್ನು ಊಹಿಸಿ ಬರೆಯಿರಿ.

೭ ಕೆಳಗೆ ಕೊಟ್ಟ ವಾಕ್ಯಗಳಿಗೆ ಉತ್ತರ ಬರೆಯಿರಿ :

( ಅ ) ಅಧರ್ಮಕ್ಕೆಳಸಿದವನು ತನ್ನ ಪಾಪದಿಂದಲೇ ಸಾಯುತ್ತಾನೆ — ಅದು ಹೇಗೆ ಸ್ಪಷ್ಟೀಕರಿಸಿರಿ.

( ಆ ) ಮದ್ದಿಲ್ಲದೆ ಮಹಾರೋಗ ಹೋಯಿತು. ಇದನ್ನು ನೀವು ಒಪ್ಪುವಿರಾ ? ಕಾರಣಗಳನ್ನು ಕೊಡಿರಿ.

( ಇ ) ವಯಸ್ಸಿಗೂ ಬುದ್ಧಿಗೂ ಸಂಬಂಧ ಇದೆ ಎಂದರೆ ಇದೆ; ಇಲ್ಲ ಎಂದರೆ ಇಲ್ಲ — ಉದಾಹರಣೆಗಳಿಂದ ವಿವರಿಸಿರಿ.

( ಈ ) ತನ್ನ ಪರಾಕ್ರಮದಲ್ಲಿ ವಿಶ್ವಾಸವಿದ್ದ ವೀರ ಎಂಥ ಆಪತ್ತಿಗೂ ಎದೆಗುಂದಲಾರ — ಮಂಗಲೇಶ, ಪುಲಕೇಶಿ ಇವರ ಉದಾಹರಣೆಗಳು ಈ ಮಾತಿಗೆ ಸಾಕ್ಷಿಯಾಗುವುವೇ ? ಸ್ಪಷ್ಟಗೊಳಿಸಿರಿ.

( ಉ ) ವಂಚಕನನ್ನು ವಂಚನೆಯಿಂದಲೇ ಎದುರಿಸುವುದು ಉಚಿತವು — ವಂಚಕನಾರು ಅವನು ಹೇಗೆ ವಂಚಿತನಾದನು ತಿಳಿಯಪಡಿಸಿರಿ.

---

## ೨. ವಾರಸದಾರ್

೧ 'ವಾರಸದಾರ್' ಏಕಾಂಕ ನಾಟಕದಲ್ಲಿ ಕಾಣುವ ಜೀವನದ ವಾಸ್ತವ ಘಟನೆ ಯಾವುದು ?

೨ ಸ್ವಾರ್ಥಪರ ಹೀನಮನವು ರಚಿಸಿದ ಯಾವ ಕಿಡಿಗೇಡಿತನವು ಈ ನಾಟಕದಲ್ಲಿ ಕಂಡುಬರುತ್ತದೆ ?

೩ ಸತ್ಯನ್ಯಾಯಗಳ ರಕ್ಷಣೆಗಾಗಿ ಈ ನಾಟಕದಲ್ಲಿ ಯಾವ ಯತ್ನ ನಡೆದಿರುತ್ತದೆ ?

೪ ಭೀಮರಾಯ ಮತ್ತು ಶ್ಯಾಮರಾಯ ಇವರಿಬ್ಬರಲ್ಲಿ ಯಾರು ಗಟ್ಟಿಗರು ? ಸಕಾರಣವಾಗಿ ಹೇಳಿರಿ.

೫ ಈ ನಾಟಕದಲ್ಲಿ ಕಲ್ಲಂಭಟ್ಟರ ಪಾತ್ರವಾವುದು ? ಅವನ ಸ್ವಭಾವಚಿತ್ರವನ್ನು ಕೊಡಿರಿ.

೬ ಸ್ವಾರ್ಥಿಗಳಿಗೆ ಬುದ್ಧಿಯನ್ನು ಕಲಿಸಲು ದೊಡ್ಡರಾಯರು ಯಾವ ಉಪಾಯವನ್ನು ಯೋಜಿಸಿದರು ? ಅದರ ಪರಿಣಾಮ ವೇನಾಯಿತೆಂಬುದನ್ನು ತಿಳಿಯಪಡಿಸಿರಿ.

೭ ದೊಡ್ಡರಾಯರ ಜೀವನನಾಟಕದ ಸೊಬಗನ್ನು ಬಣ್ಣಿಸಿರಿ.

---

## ೩. ಶಿವಭಕ್ತ ನಂದನಾರ್

೧ ಕೇರಿಯ ಜನರಿಂದ ನಂದನಿಗೆ ಆದ ಅನ್ಯಾಯವಾವುದು ? ಯಾವ ಕಾರಣಕ್ಕಾಗಿ ಅದು ಸಂಭವಿಸಿತು.

೨ ಅಜ್ಞ ಜನರಲ್ಲಿ ಧರ್ಮದ ಹೆಸರಿನಿಂದ ಯಾವ ಯಾವ ಸಲ್ಲದ ಕಾರ್ಯಗಳು ಜರುಗುತ್ತವೆ ?

೩ ನಂದನಾರ್ ಅವನ ಸ್ವಭಾವ ಚಿತ್ರವನ್ನು ಕೊಟ್ಟು ಅದರಲ್ಲಿ ನಿಮ್ಮ ಮನಸ್ಸನ್ನು ಹಿಡಿದಿರುವ ಅಂಶಗಳನ್ನು ತಿಳಿಯಪಡಿಸಿರಿ.

೪ ನಂದನ ತಾಯಿಯ ಯಾವ ವರ್ತನವು ಅವನ ಕರುಳನ್ನು ಮಿಡಿಯಿತು? ಅದಕ್ಕಾಗಿ ಅವನು ಕೈಕೊಂಡ ನಿರ್ಣಯ ವಾವುದು ?

೫ ಈ ಏಕಾಂಕ ನಾಟಕದಲ್ಲಿ ಬಂದಿರುವ ಪೂಜಾರಿಯ ವಿಚಾರ ಗಳು ನಿಮಗೆ ಒಪ್ಪಿಗೆಯಾಗುವವೆ ? ಸಕಾರಣವಾಗಿ ಹೇಳಿರಿ.

೬ ಈ ನಾಟಕದಲ್ಲಿ ಪಾರುಪತ್ಯಗಾರನು ಆಡಿದ ಪಾತ್ರವಾವುದು ? ವರ್ಣಿಸಿರಿ.

೭ ಈ ನಾಟಕದಿಂದ ನಿಮ್ಮ ಮನಸ್ಸಿನ ಮೇಲೆ ಆದ ಪರಿಣಾಮ ವನ್ನು ಕುರಿತು ಬರೆಯಿರಿ.

---

## ಪದ್ಯಭಾಗ

## ೧. ಹರಿಶ್ಚಂದ್ರ ಕಾವ್ಯ

### ಹರಿಶ್ಚಂದ್ರನ ಕಾಶೀಪ್ರಯಾಣ

೧ ಕೆಳಗಿನ ಸಮಸ್ತಪದಗಳನ್ನು ಬಿಡಿಸಿ ಹೆಸರು ಹೇಳಿರಿ :

ಕ್ಷುತ್ಪಿಪಾಸೆ, ಹೆಮ್ಮೆಳೆ, ನಟ್ಟಡವಿ, ಕರ್ಬೊಗೆ, ಕೆಂಗಿಡಿ, ಕೈಕಾಲ್, ಸುದತಿ, ಪನ್ನೀರು, ಹೊಂಗಳಸ, ಏಗೆಯ್ವೆ.

೨ ತತ್ಸಮ–ತದ್ಭವ ರೂಪಗಳನ್ನು ಬರೆಯಿರಿ :

ಜಾವ, ಕುವರ, ಋಣ, ಅಡವಿ, ಪತಿವ್ರತೆ, ಕೀರ್ತಿ, ಸಂತಸ.

೩ ಟಿಪ್ಪಣಿಗಳನ್ನು ಬರೆಯಿರಿ.

ಮೂರುಕರಣ, ಕೌಶಿಕ, ಮುತ್ತೈದೆ, ದುರ್ಮರಣ.

೪ ಕೆಳಗಿನ ಲೋಕೋಕ್ತಿಗಳ ಅರ್ಥವು ಸ್ಪಷ್ಟವಾಗುವಂತೆ ವಾಕ್ಯ ರಚಿಸಿರಿ.

( ಅ ) ತರುಣಸೂರ್ಯಂ ಕತ್ತಲೆಯನೆ ಹೊಕ್ಕಂತಾಯ್ತು.

( ಆ ) ಉತ್ತಮರ ಮುಂದಾವ ಠಕ್ಕಿರಲಾಪುದು ?

( ಇ ) ನಡೆಯೂಡೆ ಮದ್ದು ವಿಷವೊಡಲಿಂಗೆ ಹಿತ.

೫ ಕಾಶಿಗೆ ಹೊರಟ ಹರಿಶ್ಚಂದ್ರನಿಗೆ ಯಾವ ಗಂಡಾಂತರವು ಎದುರಾಯಿತು ? ಅದರಿಂದ ಅವನು ಹೇಗೆ ಪಾರಾದನು ?

೬ ಚಂದ್ರಮತಿಯ ಸ್ವಭಾವಚಿತ್ರವನ್ನು ಕೊಡಿರಿ.

೭ ಈ ಪದ್ಯಭಾಗದಲ್ಲಿ ನಿಮಗೆ ಮೆಚ್ಚಿಕೆಯಾದ ಒಂದು ಪದ್ಯವನ್ನು ಆಯ್ದು ಅದನ್ನು ನೀವು ಏಕೆ ಮೆಚ್ಚುವಿರಿ ಎಂಬದನ್ನು ತಿಳಿಸಿರಿ.

---

## ೨. ಜೈಮಿನಿಭಾರತ

### ಸೌಭರಿಮುನಿಯ ಸಂದರ್ಶನ

೧ ಕೆಳಗೆ ಕೊಟ್ಟವುಗಳಿಗೆ ಟಿಪ್ಪಣಿಗಳನ್ನು ಬರೆಯಿರಿ :

ಅತಿಥಿ, ಯೋಗಮಾರ್ಗ, ವಿಷಕಂಠ, ಅಶ್ವಮೇಧ, ಕಾಮಧೇನು, ತೀರ್ಥಯಾತ್ರೆ, ಪೈತೃಕ, ಕುತುಪಕಾಲ, ಸ ಹ ಸ್ರಾ ಕ್ಷ, ಮುರಾರಿ.

೨ ತತ್ಸಮ–ತದ್ಭವಗಳನ್ನು ಕೊಡಿರಿ :

ಮೊಗ, ಸ್ಪರ್ಶ, ಶರ್ಕರ, ಒಕ್ಕಣಿಸು, ಸಂತಸ, ಕುಮಾರ, ಬೀದಿ.

೩ 'ಕುದುರೆ' 'ಯಜ್ಞ' ಈ ಶಬ್ದಗಳ ಅರ್ಥವನ್ನು ತಿಳಿಸುವ ಶಬ್ದಗಳನ್ನು ಸಂಗ್ರಹಿಸಿರಿ.

೪ ಸಮಾಸಗಳನ್ನು ವಿಗ್ರಹಿಸಿ ಹೆಸರಿಸಿರಿ :

ಮನೆವಾಳ್ತಿ, ಕೋಲ್ಗೊಳ್ಳು, ಪ್ರತಿದಿನ, ಪೂರ್ವಾಪರ, ಭೂಮಂಡಲ, ಇಹ–ಪರ.

೫ ಅಲಸು, ಒಕ್ಕಣಿಸು, ಆದರಿಸು, ಮನೆವಾಳ್ತಿ, ಅಂತರಿಸು, ಬೀಳ್ಕೊಳ್ಳು ಈ ಶಬ್ದಗಳು ಉಂಟಾದ ರೀತಿಯನ್ನು ವಿವರಿಸಿರಿ.

೬ ಸೌಭರಿಯು ಅರ್ಜುನನನ್ನು ಏನು ಕಾರಣ ಜರೆಯುವನು ?

೭ ಸೌಭರಿಋಷ್ಯಾಶ್ರಮವನ್ನು ನಿಮ್ಮ ಶಬ್ದಗಳಲ್ಲಿ ಬಣ್ಣಿಸಿರಿ.

೮ ಚಂಡಿಯ ಸ್ವಭಾವವು ಉದ್ದಾಲಕನಿಗೆ ಇರುತ್ತಿದ್ದರೆ, ಕಥೆಗೆ ಯಾವ ಸ್ವರೂಪವುಂಟಾಗುತ್ತಿತ್ತು ? ಎಂಬುದನ್ನು ಊಹಿಸಿ ಆ ಕಥೆಯನ್ನು ಬರೆಯಿರಿ.

---

## ೩. ಚೆನ್ನಬಸವ ಪುರಾಣ

### ಕಲ್ಯಾಣಪಟ್ಟಣದ ಪರಿಸರ

೧ ಕೆಳಗಿನ ಶಬ್ದಗಳಿಗೆ ತತ್ಸಮ ತದ್ಭವ ರೂಪಗಳನ್ನು ಬರೆಯಿರಿ: ಸಿರಿ, ರನ್ನ, ಮುಖ, ತಾಣ, ಅಂಚೆ, ಕೊಂಚೆ, ಅಶೋಕ, ಕೋಕಿಲ, ಅಚ್ಚರಿ, ಸತ್ರ, ದಾಡಿಮ, ಪತ್ತನ, ಸಿಂಗರ, ಧ್ವನಿ, ಬನ.

೨ ಕೆಳಗಿನ ಸಮಾಸಗಳನ್ನು ವಿಂಗಡಿಸಿ ಹೆಸರು ಹೇಳಿರಿ:
ತಂಗಾಳಿ, ದಂಪತಿ, ಕಾಲ್ಕುಳಿ, ಸುಳಿಗಾಳಿ, ಕಾಲುಗೆಡು, ಕಿಸುವಣ್, ಕೊರಲ್ವಾಗು, ತೋರಹೋರಿ.

೩ ಗೊಲ್ಲತಿ, ಪೂರೈಸು, ಅರಮನೆ, ಬಿತ್ತರಿಸು, ಕೀಲಿಸು, ಪರಿಕಾಲ್ಗಳು, ಸೊಗಸು, ಪರಪುಟ್ಟ — ಈ ಶಬ್ದಗಳು ಸಿದ್ಧವಾದ ರೀತಿಯನ್ನು ಅರ್ಥದೊಡನೆ ವಿವರಿಸಿರಿ.

೪ ಕಲ್ಯಾಣನಾಡಿನ ಸೌಭಾಗ್ಯವನ್ನು ನೀವು ಓದಿದ ಪದ್ಯಭಾಗದಿಂದ ಸಂಗ್ರಹಿಸಿ ಬರೆಯಿರಿ.

೫ ಪರೋಪಕಾರ, ಅತಿಥಿಸತ್ಕಾರಗಳ ವಿಷಯವಾಗಿ ಕಲ್ಯಾಣನಾಡಿನಲ್ಲಿ ಕಾಣುತ್ತಿದ್ದ ಉಚ್ಚಮತವನ್ನು ವಿವರಿಸಿರಿ.

೬ ಕಲ್ಯಾಣದೇಶದಲ್ಲಿಯ ಪ್ರಾಣಿಸಂಪತ್ತಿನ ಬಗೆಗೆ ನಿಮಗೆ ತಿಳಿದು ಬರುವ ಸಂಗತಿಗಳಾವುವು?

೭ ಕಬ್ಬು, ಬತ್ತದ ಗದ್ದೆ, ತೋಟ, ಉಪವನ — ಇವುಗಳ ವರ್ಣನೆಯನ್ನು ನಿಮ್ಮ ಶಬ್ದಗಳಲ್ಲಿ ಬರೆಯಿರಿ.

೮ ಪದ್ಯ ೧೮ರಲ್ಲಿ ಮೊದಲಿನ ಮೂರು ಸಾಲುಗಳಲ್ಲಿ ಕಾಣಿಸಿಕೊಂಡ ಮಾತುಗಳನ್ನು ಸ್ಪಷ್ಟಗೊಳಿಸಲು ಅದಕ್ಕೆ ಸಂಬಂಧಪಟ್ಟ ಕಥೆಗಳನ್ನು ಬರೆಯಿರಿ.

೯. ವಿರೂಪಾಕ್ಷ ಪಂಡಿತನು ಕಲ್ಯಾಣನಾಡಿನಲ್ಲಿ ಕಂಡ ಲಾಸ್ಯಭವನವನ್ನು ಬಣ್ಣಿಸಿರಿ.

---

# ೪. ಸಮ್ಯಕ್ತ್ವಕೌಮುದಿ

## ಸುಧರ್ಮರಾಜನ ಕಥೆ

೧ ಕೆಳಗಿನ ಸಮಸ್ತಪದಗಳನ್ನು ವಿಗ್ರಹಿಸಿ ಹೆಸರನ್ನು ಹೇಳಿರಿ :
ನಾಣ್ಣುಡಿ, ಮಣಿದೊಡವು, ಕೂರಸಿ, ಕಿರುವಕ್ಕಳು, ಕುಲಹೀನ, ಅರಗುಲಿ, ಒಳ್ನುಡಿ, ನಗೆಮೊಗ, ಮರುಜನ್ಮ.

೨ ತತ್ಸಮ–ತದ್ಭವಗಳನ್ನು ಕೊಡಿರಿ :
ಲಕ್ಕ, ಅನ್ನೆಯ, ಬೀದಿ, ಸುರಗಿ, ಸಾಹಸ, ವಿಜ್ಞಾಪನೆ, ಹರಿಸ.

೩ ಈ ಪದ್ಯಭಾಗದಲ್ಲಿ ಬಂದಿರುವ ಅಹಿಂಸೆಯ ಬಗೆಗಿನ ವಿಚಾರಗಳನ್ನು ಸಂಗ್ರಹಿಸಿ ಬರೆಯಿರಿ.

೪ ಪುಣ್ಯ–ಪಾಪ, ರಾಜಧರ್ಮ, ಬಡತನದ ಬವಣೆ, ಸಿರಿಯ ಆಡಂಬರ, ದೈವಬಲ — ಇವುಗಳ ಬಗೆಗೆ ಕವಿಯ ಅಭಿಪ್ರಾಯ ವೇನು ?

೫ ಸುಧರ್ಮರಾಜನ ಕಥೆಯನ್ನು ನಿಮ್ಮ ಶಬ್ದಗಳಲ್ಲಿ ಬರೆಯಿರಿ.

೬ ಪರಮಾರ್ಥವೆಂದರೇನು ? ಸುಧರ್ಮರಾಜನ ಕಥೆಯಲ್ಲಿ ನಿರೂಪಿತವಾಗಿರುವ ಪರಮಾರ್ಥದ ಸ್ವರೂಪವನ್ನು ವಿವರಿಸಿರಿ.

೭ ಚಾರ್ವಾಕರು ಯಾರು ? ಅವರ ಸಿದ್ಧಾಂತಗಳ ಬಗೆಗೆ ನಿಮಗೆ ತಿಳಿದುಬರುವ ಸಂಗತಿಗಳನ್ನು ಸಂಗ್ರಹಿಸಿರಿ.

---

*Title of the Book :*
**Sahitya Sankalana**
**Higher X th Std.**

*Zone :*
**All Districts.**

*Price of the Book :*
**Rs. 1=37**

*Editors :*
**C. S. Kulkarni,** M. A., B. T.
**G. V. Chulaki**

*Publishers :*
**B. C. Hiremath, Manager,**
**Kannada Sahitya Prakashana**

*Year of Publication :*
**1962**

*Number of Copies Printed :*
**5,000**

*Paper used :*
**White Printing D. Crown 26 lbs.**

*Size of Type face used :*
**Kannada 12 pt.**

*Total No. of pages Excluding Cover :*
**168**

*Manufacture of the paper :*
**Sirpur Paper Mills**

*Name of the Press :*
**M/s. Chandrodaya, Press, Dharwar.**